ಪ್ರಕಾಶಕರು :
ಎಂ. ಎಚ್. ರಾವ್
ಸರ್ವೋದಯ ಸಾಹಿತ್ಯ ಮಾಲೆ,
ಹುಬ್ಬಳ್ಳಿ

ಮುದ್ರಕರು :
ಎಸ್. ವ್ಹಿ. ಶ್ರೇಷ್ಠಿ
ರಾಯಲ್ ಪ್ರಿಂಟಿಂಗ್ ಪ್ರೆಸ್
ಹುಬ್ಬಳ್ಳಿ

★

ಮೊದಲನೆಯ ಆವೃತ್ತಿ
ಮೇ ೧೫, ೧೯೫೨

ಬೆಲೆ : ೧—೦—೦

# ಸರ್ವೋದಯ ಸಾಹಿತ್ಯಮಾಲೆ, ಹುಬ್ಬಳ್ಳಿ

## (ಮನವಿ)

ಸ್ನೇಹಿತರೇ,

೧೯೪೮ನೇ ಅಗಸ್ಟ ೧೫ನೇ ತಾರೀಖಿನಿಂದ ಈ ಸರ್ವೋದಯ ಸಾಹಿತ್ಯಮಾಲೆಯನ್ನು ನಾನು ನಡೆಸಿಕೊಂಡು ಬರುತ್ತಿದ್ದೇನೆ. ಮೂರು ತಿಂಗಳಿಗೊಂದರಂತೆ ವರುಷಕ್ಕೆ ಒಟ್ಟು ನಾಲ್ಕು ಗ್ರಂಥಗಳನ್ನು ಕೊಡುವುದು ಈ ಮಾಲೆಯ ಯೋಜನೆ. ಮತ್ತು ಅದರಂತೆ ನಿಯತ ಕಾಲಕ್ಕೆ ಸರಿಯಾಗಿ ಇಷ್ಟರ ವರೆಗೂ ಅನೇಕ ಪುಸ್ತಕಗಳನ್ನು ಪ್ರಕಟಿಸಲಾಗಿದೆ. ಇವುಗಳಿಗಿಂತಲೂ ದೊಡ್ಡ, ಉತ್ತಮ ಹಾಗೂ ಸರ್ವಾಂಗ ಸುಂದರವಾದ ಸಾಹಿತ್ಯ ಕೃತಿರತ್ನಗಳನ್ನು ಅರ್ಪಿಸಲು ಸಹಾಯ ಸಂಪತ್ತು ಅತ್ಯಗತ್ಯವಾಗಿದೆ. ಆದುದರಿಂದ ತಾವೆಲ್ಲರೂ ಕೊಡುಗೈಯಿಂದ ಗ್ರಂಥಮಾಲೆಗೆ ಸಹಾಯ ನೀಡಬೇಕೆಂದು ಅರಿಕೆ.

ಮಹನೀಯರೇ, ಅನೇಕ ವರುಷಗಳಿಂದ ನಾನು. ಕನ್ನಡನಾಡು ಮತ್ತು ನುಡಿಗೆ ನನ್ನ ಅಳಿಲ ಸೇವೆ ಸಲ್ಲಿಸುತ್ತಾ ಬಂದಿದ್ದೇನೆ ೧೯೩೪ರಿಂದ ೧೯೪೪ರ ವರೆಗೆ "ಲೋಕಮತ, ಸಂಯುಕ್ತ ಕರ್ನಾಟಕ, ನವಯುಗ" ಮೊದಲಾದ ಪತ್ರಿಕೆಗಳಲ್ಲಿ ಉಪಸಂಪಾದಕನಾಗಿ ದುಡಿದುದುಂಟು. ಆಗಿನ ಆ ಕಾಲದಲ್ಲಿ ಈ ಪತ್ರಿಕೋದ್ಯಮ ಕ್ಷೇತ್ರಕ್ಕೆ ಕಾಲಿಟ್ಟವರೇ ಕಡಿಮೆ. ಅಲ್ಪ ಸಂಬಳಕ್ಕೆ ಹಗಲಿರುಳು ದುಡಿಯಬೇಕಾಗಿದ್ದ ಕಾಲವದು. ಕನ್ನಡದ ಒಂದು ಸ್ವಾಭಿಮಾನ, ನಾಡಿನ ಒಂದು ಅಭಿಮಾನ ಇವೇ ಹೊಟ್ಟೆ ಬಾಯಿ ಕಟ್ಟಿಕೊಂಡು "ಮಿಶ್ನರಿ"ಯಂತೆ ಶ್ರಮಿಸಲು ಪ್ರೇರಕ ಶಕ್ತಿಗಳಾಗಿದ್ದುವು. ನಾಡಿನ ಈ ಸೇವಾ ಬುದ್ಧಿಯಿಂದಲೇ ರಾಷ್ಟ್ರೀಯ ಚಳವಳಿಯಲ್ಲೂ ಭಾಗ ವಹಿಸಿದೆ ಮತ್ತು ೧೯೪೨ರ ಸ್ವಾತಂತ್ರ್ಯ ಹೋರಾಟದಲ್ಲಿ ಒಂದು ವರುಷದ ವರೆಗೆ ಬೆಳಗಾಂವಿ ಹಿಂಡಲಗಿ ಸೆರೆಮನೆಯ ವಾಸವನ್ನನುಭವಿಸಿದೆ.

ಗಾಂಧೀಜಿಯವರು ಜೀವಂತವಿದ್ದಾಗ, "ವಿಧಾಯಕ ಕಾರ್ಯದಲ್ಲಿ ಪ್ರವೃತ್ತರಾಗಿರಿ. ಸ್ವಾವಲಂಬಿಯಾಗಿರಿ"ಎಂದು ಸಾಮಾಜಿಕ ಕಾರ್ಯಕರ್ತರಿಗೆ ಬೋಧಿಸಿದುದುಂಟು. ಅವರ ದಿವ್ಯ ಆದರ್ಶಕ್ಕೆ ಅಂಟಿಕೊಂಡೇ ಈ ರಚನಾ

ತ್ಮಕ ಕಾರ್ಯದಲ್ಲಿ ಜೀವನ ಸವೆಸುವ ಉದ್ದೇಶದಿಂದ ಈ ಗ್ರಂಥಮಾಲೆಯನ್ನು ನಾನು ನಡೆಸಿದ್ದೇನೆ. ಆದರೆ ಇದು ಸುಲಭ ಕಾರ್ಯವೇನೂ ಅಲ್ಲ. ನಮ್ಮ ಪ್ರಾಂತ ಹಿಂದುಳಿದ ಪ್ರದೇಶ. ಸಾಕ್ಷರ ಜನರೂ ಕಡಿಮೆ. ಸಾಹಿತ್ಯಕ್ಕೆ ದೊರೆವ ಪ್ರೋತ್ಸಾಹವೂ ಅಷ್ಟಕ್ಕಷ್ಟೇ. ಯುದ್ಧೋತ್ತರ ಆರ್ಥಿಕ ಮುಗ್ಗಟ್ಟು ಜನರನ್ನು ಬಗ್ಗಿಸಿದೆ. ಕರ್ನಾಟಕ ವಿವಿಧ ಆಡಳಿತೆಗಳೊಳಗೆ ಹರಿದು ಹಂಚಿ ಹೋಗಿರುವುದರಿಂದಲೂ ಸಾಹಿತ್ಯಕ್ಕೆ ಎಲ್ಲ ಭಾಗಗಳಲ್ಲೂ ಪ್ರೋತ್ಸಾಹ ದೊರೆಯುವುದಿಲ್ಲ. ಹೀಗಾಗಿ ಗ್ರಂಥಮಾಲೆಯು ಆರ್ಥಿಕ ಅನಾನುಕೂಲತೆಗೊಳಗಾಗಿದೆ.

ಗ್ರಂಥಮಾಲೆಯ ಯಶೋಭಿವೃದ್ಧಿಯನ್ನು ಬಯಸಿ ಈಗಾಗಲೇ ಕೆಲವು ಮಹನೀಯರು ಉದಾರ ಸಹಾಯ ನೀಡಿದ್ದಾರೆ. ನೀವು ಕೂಡಾ ಗ್ರಂಥಮಾಲೆಯ ಆಶ್ರಯದಾತರು, ಹಿತಚಿಂತಕರು, ಪೋಷಕರು, ಅಥವಾ ಕೊನೆಗೆ ಚಂದಾದಾರರಾಗಿ ನಿಮ್ಮ ಕೈಲಾದ ಸಹಾಯ ನೀಡಬೇಕೆಂದು ವಿನಂತಿ. ಹಿಂದೆ ಚಂದಾದಾರರಾದವರು ನಡುವೆ ಬಿಡದೆ ಖಾಯಂ ಸದಸ್ಯರಾಗಬೇಕೆಂದೂ ತಮ್ಮ ಇಷ್ಟಮಿತ್ರರು ಹಾಗೂ ತಮ್ಮ ಊರಿನ ವಾಚನಾಲಯ, ಗ್ರಂಥಾಲಯ ಮೊದಲಾದ ಸಂಘ ಸಂಸ್ಥೆಗಳ ಸದಸ್ಯತ್ವ ಮಾಡಿಕೊಟ್ಟು ನೆರವಾಗಬೇಕೆಂದೂ ಪ್ರಾರ್ಥನೆ

## ಗ್ರಂಥಮಾಲೆಯ ಸಹಾಯ ಯೋಜನೆ

೧) **ಆಶ್ರಯದಾತರು:**- ರೂ. ೧೦೦ ಮತ್ತು ಹೆಚ್ಚು ಕೊಡುವವರು (ಅವರಿಗೆ ಯಾವಾಗಲೂ ಗ್ರಂಥ ಕೊಡಲಾಗುವದು.)

೨) **ಹಿತಚಿಂತಕರು:**-ರೂ. ೨೫(ಅವರಿಗೆ ೭ವರ್ಷಗಳವರೆಗೆ ಗ್ರಂಥಗಳು)

೩) **ಪೋಷಕರು:**- ರೂ. ೧೦ (ಅವರಿಗೆ ೩ ವರ್ಷ ಗ್ರಂಥಗಳು)

೪) **ಚಂದಾದಾರರು:**- ರೂ. ೫ (ಅಂಚೆವೆಚ್ಚ ಕೂಡಿ)

ಹುಬ್ಬಳ್ಳಿ
೧೫-೫-೫೨

ಎಂ. ಹರಿದಾಸ್‌ರಾವ್
(ಸಂಪಾದಕ)

# ಪ್ರಕಾಶಕರ ಅರಿಕೆ

"ನವರತ್ನದ ಕಡಗ" ಸರ್ವೋದಯ ಸಾಹಿತ್ಯಮಾಲೆ (ಹುಬ್ಬಳ್ಳಿ) ಯಲ್ಲಿ ಆರಳಿರುವ ನಾಲ್ಕನೇಯ ವರುಷದ ನಾಲ್ಕನೇಯ ಪುಷ್ಪವಾಗಿದೆ. ೧೯೫೧ರ ಆಗಸ್ಟನಿಂದ ಆರಂಭವಾದ ಗ್ರಂಥಮಾಲೆಯ ನಾಲ್ಕನೇಯ ವರುಷದಲ್ಲಿ ಮೊದಲನೇ ಪುಸ್ತಕವಾಗಿ 'ಹುಚ್ಚರ ಮನೆ" ಎಂಬ ಕಾದಂಬರಿ ಯನ್ನೂ, ಎರಡು ಮತ್ತು ಮೂರನೇ ಪುಷ್ಪಗಳನ್ನಾಗಿ, "ಸಿರಿಗನ್ನಡ ಮಹಾಭಾರತ" ಎಂಬ ಸಂಪೂರ್ಣ ವಚನ ಭಾರತವನ್ನೂ ಸಕಾಲದಲ್ಲಿ ಕೊಟ್ಟಿರುವೆವು "ನವರತ್ನದ ಕಡಗ" ನಾಲ್ಕನೇ ವರುಷದ ಚಂದಾದಾರ ರಿಗೆ ಸಲ್ಲತಕ್ಕ ಕೊನೆಯ ಪುಸ್ತಕವಾಗಿದೆ

ಈ ಕಥೆಗಳನ್ನು ಬರೆದ ಸೌ. ಶಾರದಾ ಜಡೆಯವರ ಹುಟ್ಟೂರು ಮೈಸೂರು ಇಂಟರ್ ಮೀಡಿಯೇಟ್ ವರೆಗೂ ಓದಿಕೊಂಡಿರುವರು. ಅನೇಕ ವರುಷಗಳಿಂದಲೂ ಕನ್ನಡ ಕತೆ, ಕವನ, ನಾಟಕ ಮತ್ತು ಪ್ರಬಂಧ ಗಳನ್ನು ಬರೆಯುತ್ತಾ ಬಂದಿರುವರು. ನಾಡಿನ ವಿವಿಧ ಪತ್ರಿಕೆಗಳಲ್ಲಿ ಅವು ಬೆಳಕು ಕಂಡಿವೆ. 'ಆಕಾಶವಾಣಿ'ಯಲ್ಲೂ ಆಗಾಗ ಅವರ ಕಾರ್ಯಕ್ರಮ ಗಳಿರುವುದುಂಟು. ರಾಷ್ಟ್ರಭಾಷೆಯನ್ನೂ ಕಲಿತು'ವಿಶಾರದ'ಪರೀಕ್ಷೆಯಲ್ಲೂ ಉತ್ತೀರ್ಣರಾಗಿದ್ದಾರೆ. ಉಪಾಧ್ಯಾಯಿನಿಯರಾಗಿ ಅವರು ಕನ್ನಡ ನಾಡು ನುಡಿಗಳ ಅವಿಶ್ರಾಂತ ಸೇವೆ ಮಾಡುತಿದ್ದಾರೆ. ನಮ್ಮ ಗ್ರಂಥಮಾಲೆಗೆ ಅವರು ಈ ಕಥಾಸಂಗ್ರಹವನ್ನು ದಯಪಾಲಿಸಿದ್ದಕ್ಕೆ ಅವರಿಗೆ ಕೃತಜ್ಞ. ದೇವರು ಅವರಿಗೆ ಸಕಲ ಸೌಭಾಗ್ಯಗಳನ್ನು ನೀಡಲೆಂದು ಹಾರೈಸುತ್ತೇವೆ.

ಇದೇ ೧೫, ಆಗಸ್ಟ, ೧೯೫೫ರಿಂದ ಗ್ರಂಥಮಾಲೆಯ ಐದನೇಯ ವರುಷವು ಆರಂಭವಾಗುತ್ತದೆ. ಈ ಹೊಸ ವರುಷದ ಮೊದಲನೇ ಪುಸ್ತಕ ವನ್ನು ವಾರ್ಷಿಕ ಚಂದಾ ಹಣಕ್ಕಾಗಿ (ರೂ ೫– ಅಂಚೆವೆಚ್ಚ ಸೇರಿ) ಆಗಸ್ಟ ತಿಂಗಳಿನಲ್ಲಿ ವಿ. ಪಿ. ಮಾಡಿ ಕಳಿಸುತ್ತೇವೆ. ಚಂದಾದಾರರು ಎಂದಿನಂತೆ ಅದನ್ನು ಸ್ವೀಕರಿಸಿ ಗ್ರಂಥಮಾಲೆಗೆ ಸಹಾಯ ಸಲ್ಲಿಸಬೇಕೆಂದು ಪ್ರಾರ್ಥನೆ. ಈ ಹೊಸ ವರುಷದಲ್ಲೂ ಸಕಾಲಕ್ಕೆ ಸರಿಯಾಗಿ ಗ್ರಂಥಗಳನ್ನು ಕೊಡಲು ಹೆಣಗುವೆವು. ಅಲ್ಲದೆ ಹಿಂದಿನ ವರುಷಗಳಿಗಿಂತಲೂ ಅದಷ್ಟು ಉತ್ತಮ

ಹಾಗೂ ದೊಡ್ಡ ಗ್ರಂಥಗಳನ್ನು ಕೊಡಲು ಶಕ್ತಿ ಮೀರಿ ಯತ್ನಿಸುವೆವು.

ಗ್ರಂಥಮಾಲೆಗೆ ಚಂದಾದಾರರಾಗಿ ಹಾಗೂ ಮಾಲೆಯ ಗ್ರಂಥಗಳನ್ನು ಕೊಂಡು ಕೊಂಡು ನೆರವಾದ ಕರ್ನಾಟಕದ ಸರ್ವ ಮಹನೀಯರಿಗೂ ಮಹಿಳೆಯರಿಗೂ ಅನಂತ ವಂದನೆಗಳು. ಜನರ ಸಹಾನುಭೂತಿ, ಸ್ನೇಹ ಹಾಗೂ ಸಹಕಾರಗಳಿಂದಲೇ ಈ ನಾಲ್ಕು ವರುಷಗಳ ವರೆಗೆ ಹೇಗಾದರೂ ಗ್ರಂಥಮಾಲೆಯು ನಡೆದುಕೊಂಡು ಬಂದಿತು. ಅವರ ಸಹಾಯದಿಂದ ಇದು ಇನ್ನು ಮುಂದಾದರೂ ಬಾಳಿ ಬೆಳಗುವುದೆಂದು ನಂಬಿದ್ದೇವೆ. ದೇವರು ನಡೆಸಿದಂತೆ ಆಗಲಿ.

ಹುಬ್ಬಳ್ಳಿ
೧೫, ೫, ೫೨

ಎಂ. ಹರಿದಾಸ್‌ರಾವ್

---

( ೫ನೇ ವರುಷದ ಮೊದಲನೇ ಕುಡಿ )

**ಕೈ ಹಿಡಿದ ಕಾವೇರಿ**

(ಕಾದಂಬರಿ)

ಆಗಸ್ಟ್ ೧೯೫೨ಕ್ಕೆ ಹೊರಬೀಳಲಿದೆ.

---

# ಬಿನ್ನಹ

ಕನ್ನಡ ನುಡಿ ದೇವಿಯನ್ನು ಶೃಂಗರಿಸಲು ಅನೇಕ ಸೋದರ ಸೋದರಿಯರು ಅಮೂಲ್ಯ ಆಭರಣಗಳನ್ನು ತಂದಿರುವುದನ್ನು ನೋಡಿ, ನನಗೂ ನಾಡನುಡಿಯ ಸೇವೆ ಮಾಡಬೇಕೆಂದು ಆಸೆಯಾಯಿತು ಆ ಆಸೆಯ ಫಲವೇ ಈ 'ನವರತ್ನದ ಕಡಗ'. ಆಳವಾದ ಗಣಿಗಳಲ್ಲಿಳಿದು ಅಮೂಲ್ಯವಾದ ರತ್ನಗಳನ್ನೇ ಆರಿಸಿ ತೆಗೆಯುವ ಅಭ್ಯಾಸ ಸಾಲದೋ, ಕುಸುರಿ ಕೆಲಸದಲ್ಲಿ ಕೈ ಪಳಗಿಲ್ಲವೋ, ಎಂಬುದನ್ನು ಪರೀಕ್ಷೆಗೊಳಪಡಿಸಿ ತಿಳಿಯಬೇಕೆಂದೇ ಇದನ್ನು ಸಹೃದಯರ ಮುಂದಿಡಲಾಗಿದೆ.

ಈ ಹೊತ್ತಗೆಯಲ್ಲಿರುವ ಹೆಚ್ಚು ಕತೆಗಳನ್ನು ಬರೆದು ಹತ್ತು ವರುಷಕ್ಕೆ ಮೇಲಾದವು. ಸಣ್ಣವಳಿದ್ದಾಗಿನಿಂದಲೂ ಕನ್ನಡ ಕಾದಂಬರಿ, ಸಣ್ಣ ಕತೆ, ನಾಟಕ, ಪದ್ಯಗಳನ್ನು ಹೆಚ್ಚಾಗಿ ಓದುತ್ತಿದ್ದುದ್ದರಿಂದಲೋ ಏನೊ, ನನಗೆ ಕತೆಯ ಹುಚ್ಚು ಹಿಡಿಯಿತು. ನಮ್ಮ ತಾಯಿ ತಾವು ಕಂಡು ಕೇಳಿದ, ಅನುಭವಿಸಿದ ವಿಚಾರಗಳನ್ನು ಬಣ್ಣಿಸಿ ಹೇಳುತ್ತಿದ್ದಾಗ ನನ್ನ ಮನಸ್ಸಿನಲ್ಲಿ ಕತೆಯ ಕಲ್ಪನೆ ಮೂಡಿತು ಸಮಾಜದ ಅವ್ಯವಸ್ಥೆಯನ್ನು ಕಂಡಾಗ ಮನಸ್ಸು ಕಥಾರಚನೆಗಾಗಿ ಆತುರಗೊಂಡಿತು. ಇಷ್ಟಾದರೂ, ಕಲ್ಪನೆ ಕೃತಿಗಿಳಿದದ್ದು ಮಾತ್ರ ಶ್ರೀ 'ರಘು' ಅವರ ಉತ್ತೇಜನದಿಂದಲೇ ಎಂದು ಹೇಳಬೇಕಾಗಿದೆ. ನಾನವರಿಗೆ ಚಿರಋಣಿ. ಬರೆದ ಕತೆಗಳನ್ನು ತಮ್ಮ ಪತ್ರಿಕೆಯಲ್ಲಿ ಪ್ರಕಟಿಸುತ್ತಾ ಬಂದ 'ಕತೆಗಾರ' ಸಂಪಾದಕರಿಗೂ, ಬಿಡಿ 'ರತ್ನ'ಗಳನ್ನು 'ಕಡಗ'ದಲ್ಲಿ ಕೂಡಿಸಿ ಉಪಕಾರ ಮಾಡಿದ ಸರ್ವೋದಯ ಸಾಹಿತ್ಯಮಾಲೆಯ ಶ್ರೀ. ಹರಿದಾಸರಾಯರಿಗೂ ತುಂಬಾ ಕೃತಜ್ಞಳಾಗಿದ್ದೇನೆ.

ಈತ್ತೀಚೆಗೆ ಈ ಕತೆಗಳನ್ನು ಹೋಲುವ, ಅಥವಾ ಈ ಕಥಾವಸ್ತುಗಳನ್ನೊಳಗೊಂಡ ಅನೇಕ ಕತೆಗಳು ಪ್ರಕಟವಾಗಿವೆ. ಅದನ್ನು ಓದಿದವರು ಸಂದೇಹಕ್ಕೊಳಗಾಗಬಹುದು. ಆದರೆ ನನ್ನ ಕತೆಗಳು ಬೆಳಕು ಕಂಡು ಹತ್ತು ವರುಷಗಳ ಮೇಲಾಯಿತೆಂಬುದನ್ನು ಗಮನಿಸಿದರೆ ಸಂದೇಹಕ್ಕಾಸ್ಪದವಿರಲಾರದು.

ನಾಡು ನುಡಿಯ ಸೇವೆ ಸಲ್ಲಿಸಬೇಕೆಂಬ ನನ್ನಾಸೆಗೆ ದೇವರ ದಯವಿರಲಿ; ನಾಡಿನ ಜನರ ಪ್ರೋತ್ಸಾಹದ ಹೊಳೆ ಹರಿದು ಬರಲಿ.

ವೈಶಾಖ ಶುದ್ಧ ಪಂಚಮಿ
ಹೊಸಪೇಟೆ

ಶಾರದಾ ಜಡೆ "ವಿಶಾರದ"

---

## ಕಥೆಗಳು

ಪುಟ

# ನವರತ್ನದ ಕಡಗ

ರಾಯರ ಮನೆ ಅಂದರೆ ನಂದಗೋಕುಲ. ಆದರೆ ರಾಯರ ಸ್ವಂತದ್ದು ಒಂದೂ ಅಲ್ಲ. ರಾಯರಿಗೆ ಈಗ ೫೦ನೇ ವರ್ಷ. ''ಅಪುತ್ರಸ್ಯ ಗತಿರ್ನಾಸ್ತಿ'' ಎಂಬ ಸಿದ್ಧಾಂತವು ಅವರ ತಲೆಯಲ್ಲಿ ಕೊರೆಯುತ್ತಿದೆ. ಮೊಮ್ಮಕ್ಕಳ ಆಟ ಪಾಟಗಳನ್ನು ನೋಡಿ ಹಿಗ್ಗುವ ಕಾಲವಾದರೂ ಮಕ್ಕಳ ಮುಖವನ್ನೂ ಕಾಣರು. ಆದರೂ ಅವರಿಗೆ ಇತರರ ಮಕ್ಕಳನ್ನು ಕಂಡರೆ ತುಂಬಾ ಮಮತೆ. ವಿಶಾಲವಾದ ಹೃದಯ ಅವರದು. ಅದರಿಂದಲೆ ಅವರ ಮನೆ ನಂದಗೋಕುಲವೆನಿಸಿತ್ತು. ಎಲ್ಲೆಲ್ಲಿಯ ಸಂಬಂಧಿಕರ ಮಕ್ಕಳೂ ಬಡವಿದ್ಯಾರ್ಥಿಗಳೂ ಮನೆಯನ್ನು ತುಂಬಿದ್ದರು. ಆದರೆ ರಾಯರ ಕುಟುಂಬ ಇದಕ್ಕೆ ಶುದ್ಧ ವಿರುದ್ಧ. ಅವರ ಆಸ್ತಿಯಲ್ಲಿ ಸ್ವಲ್ಪವೂ ಮುಕ್ಕಾಗಬಾರದು, ವಸ್ತ್ರಾಲಂಕಾರಗಳಲ್ಲಿ ಒಂದೂ ಕಳವೆಯಾಗಲಾಗದು; ನಿಧಿಗಾವಲಿನ ಸರ್ಪದಂತೆ ಕಬ್ಬಿಣದ ಪೆಟ್ಟಿಗೆಗಳನ್ನು ಭದ್ರಪಡಿಸುತ್ತಿದ್ದರು. ಆಸ್ತಿಯ ಪೂರ್ಣ ಹಕ್ಕನ್ನು ಭಾವೀ ಪುತ್ರನಿಗೆ ವಹಿಸಿಕೊಡಬೇಕೆಂದೇ ಅವರ ಸಂಕಲ್ಪ. ವ್ರತ, ಪೂಜೆ, ಯಾರು ಹೇಗೆ ಹೇಳಿದರೋ ಹಾಗೆ ಮಾಡುವರು. ಏತಕ್ಕೆ ? ಪುತ್ರಲಾಭಕ್ಕಾಗಿ. ಇವರ ಮೌಢ್ಯವನ್ನು ಕಂಡ ರಾಯರು, "ಪ್ರತ್ಯಕ್ಷ ದೇವರೆಂದರೆ ಈ ಮಕ್ಕಳು. ಅವನ್ನು ಸಂತೋಷಪಡಿಸಿದರೆ, ದೇವರಿಗೆ ತೃಪ್ತಿಯಾಗಿ ಒಳ್ಳೆಯದನ್ನು ಮಾಡುತ್ತಾನೆ. ನಿನ್ನ ವ್ರತ, ಪೂಜೆಗಳಿಗಿಂತ ಇದು ಶ್ರೇಷ್ಠವಾದ ಪೂಜೆ. ಮಕ್ಕಳನ್ನು ಕೊಡುವ ದೇವರು ಮುಂದೆ ಅವಕ್ಕೆ ಬೇಕಾದುದನ್ನೆಲ್ಲಾ ತಾನೇ ಹವಣಿಸುತ್ತಾನೆ. ಆ ಭಾರ ಅವನ ಮೇಲಿರಲಿ; ನಾವೇಕೆ ಇಷ್ಟು ಕಾರ್ಪಣ್ಯದಿಂದ ಕೂಡಿಡಬೇಕು'' ಎನ್ನುವರು. ಆದರೆ, ಇವೆಲ್ಲಾ ''ಗೋರ್ಕಲ್ಲ ಮೇಲೆ ಮಳೆ ಸುರಿದಂತೆ" ಎನ್ನುವಂತಾಗುತ್ತಿತ್ತು.

ಅಮ್ಮಾವರು ಪೂಜೆ, ದಾನ, ಧರ್ಮ ತೀರ್ಥಯಾತ್ರೆ ಎಲ್ಲಾ ಮುಗಿಸಿ, ಈಗ ಪುತ್ರಕಾಮ್ಯಾರ್ಥವೆನಿಸಿದ ಸೂರ್ಯ ನಮಸ್ಕಾರ ವ್ರತ ಮಾಡಿ ಮಂಗಳಮಾಡುವದರಲ್ಲಿದ್ದರು.

ಮಂಗಳದ ಗಲಾಟೆ. ಅಮ್ಮಾವರಿಗೆ ಕೈ ತೆರಪೇ ಇಲ್ಲ. ಎಲ್ಲೆಲ್ಲೂ ಅವರೇ. ತಮ್ಮ ಸಕಲಾಭರಣವನ್ನೂ ಮೈಮೇಲೆ ಧರಿಸಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ, ನವರತ್ನದ ಕಡಗವು ಎಲ್ಲರ ಕಣ್ಣಿಗೂ ಕಾಣುವಂತೆ ಕೈ ತಿರುಗಿಸುತ್ತಾ ಅತ್ತಿಂದಿತ್ತ ಇತ್ತಿಂದತ್ತ ಓಡಾಡುತ್ತ "ಎಲ್ಲಾ ಬಡಿಸುತ್ತಾ ಇದ್ದೀಯಾ ರಾಮಣ್ಣಾ" ಅಂದರು.

"ಬಡಿಸುವುದು ಆಗುತ್ತೆ. ಮೊದಲು ಉಪ್ಪಿನಕಾಯಿ ಬಡಿಸಬೇಕು. ಈಚೆ ಇಲ್ಲವಲ್ಲಾ."

"ಹಾಗಾದರೆ ತೆಗೆದುಕೊಡುತ್ತೇನೆ. ನೀವ್ಯಾರೂ ಮುಟ್ಟಬೇಡಿಯಪ್ಪಾ ಮಡೀಲಿಟ್ಟಿದ್ದೇನೆ, ಸದ್ಯಾ"

ಅಂದಿನ ಪೂಜಾಕ್ರಮವು ಮುಗಿಯಿತು. ರಾಯರ ಮನಸ್ಸಿಗೆ ಏನೇನೂ ಸಮಾಧಾನವಿಲ್ಲದಿದ್ದರೂ, ಅಮ್ಮಾವರು ಮಾತ್ರ ಗಾಳಿಗೋಪುರಗಳನ್ನು ನಿರ್ಮಿಸುತ್ತಿದ್ದರು.

o o o

"ರಾಮಣ್ಣಾ! ನಿಜ ಹೇಳಿಬಿಡು. ತಪ್ಪುಮಾಡಿ, ಇಲ್ಲಾ ಅಂದರೆ ಸುಮ್ಮನೆ ಕೇಳಿಬಿಡುವುದಕ್ಕೆ ಆಗುತ್ತದೆಯೇ? ಅನ್ಯಾಯವಾಗಿ ಕೆಟ್ಟು ಹೋಗಬೇಡ. ಸುಮ್ಮನೆ ತಂದಿಟ್ಟು ಬಿಡು ತಿಳಿತೇ?"

"ಅಮ್ಮಾ! ನಿಮ್ಮನ್ನು ನನ್ನ ಹೆತ್ತತಾಯಿ ಅಂತ ತಿಳಿದಿದೇನೆ. ಏನು ಮಾಡೆಂದರೂ ಮಾಡಲು ಸಿದ್ಧನಿದ್ದೇನೆ. ಸುಳ್ಳಾಡಲಾರೆ. ದೇವರು ಸಾಕ್ಷಿಯಾಗಿ ನನ್ನ ಮಕ್ಕಳಾಣೆಗೂ ನಾನು ಮುಟ್ಟಿಲ್ಲಮ್ಮಾ"

"ನಿನ್ನ ಆಣೇ ಸಾಕ್ಷಿ ಕಟ್ಟಿಕೊಂಡು ನಾನೇನು ಮಾಡಲೀ? ನಿಜ ಹೇಳು. ಎಲ್ಲಾ ಆದ ಮೇಲೆ ಅಡಿಗೆ ಮನೇ ಒಳಗೆ ಇನ್ಯಾರು ಹೊಕ್ಕಿದ್ದರು? ಊಟಮಾಡುವಾಗ ಅಡಿಗೆಯಲ್ಲಾ ಕಡಗಕ್ಕೆ ಮೆತ್ತಿಕೊಳ್ಳುತ್ತೆ ಅಂತ ಪಕ್ಕದಲ್ಲೇ ಇಟ್ಟೆ. ಊಟಮಾಡಿ ಕೈತೊಳೆದುಕೊಂಡು ಬಂದೆ. ಎಲ್ಲೋ ಮರೆತು ಹೋಯಿತು. ಈಗ ನೋಡಿದರೆ ಅಲ್ಲಿ ಕಡಗವೇ ಇಲ್ಲವಲ್ಲಾ; ಇನ್ಯಾರು ಬಂದಿದ್ದರು ಹೊಸದಾಗಿ? ನೀನೇ ಹೇಳು ಸ್ವಲ್ಪ. ಹಾವಿಗೆ ಹಾಲೆರೆದ ಹಾಗಾಯಿತು ನಿನ್ನನ್ನು ಇಲ್ಲಿ ಸೇರಿಸಿದ್ದು"

ರಾಮಣ್ಣ ನತಶಿರನಾಗಿ ನಿಂತಿದ್ದ. ಆರಾಮ ಕುರ್ಚಿಯನ್ನೊರಗಿ

ಎಲ್ಲವನ್ನೂ ಕೇಳುತ್ತಾ ಇದ್ದ ರಾಯರು " ರಾಮೂ! ಹಾಗೇನಾದರೂ ಇದ್ದರೆ ಕೊಟ್ಟುಬಿಡು ನಿನ್ನನ್ನೇನೂ ಮಾಡುವುದಿಲ್ಲ ನೀನು ಅಂಥವನಲ್ಲಾ ಎನ್ನುವುದು ನನಗೆ ಗೊತ್ತಿದೆ. ಆದರೂ ಮನುಷ್ಯ ಏನೋ ಒಂದು ಸಾರೆ ತಪ್ಪಿದ್ದರೇನಾಯ್ತು ರಾಮೂ ? "

ರಾಮಣ್ಣನ ತಲೆ ತಿರುಗಿತು ಕಣ್ಣಲ್ಲಿ ನೀರು ತುಂಬಿ, ಗಂಟಲು ಬಿಗಿದು, ಮಾತನಾಡಲವಕಾಶವಕಾಶವಾಗಲಿಲ್ಲ. ಆದರೂ " ಮಹಾಸ್ವಾಮೀ ! ಉಂಡ ಮನೆಗೆ ಎರಡು ಬಗೆಯುವಂಥಾ ನೀಚನಲ್ಲ ನಾನು. ಆದರೂ ತಪ್ಪನ್ನು ಒಪ್ಪಿಕೊಂಡೇನು. ಕಡಗವನ್ನು ಎಲ್ಲಿಂದ ತರಲಿ ? ನನ್ನ ವಿತ್ತಾಪಾರವನ್ನೆಲ್ಲಾ ಮಾರಿದರೂ ನಿಮ್ಮ ಕಡಗದ ಬೆಲೆಯಾಗಲಾರದಲ್ಲಾ. ಇನ್ನೇನು ಮಾಡೆಂದರೂ ಮಾಡುತ್ತೇನೆ. ಕಡಗವನ್ನು ತಂದು ಕೊಡುವ ಶಕ್ತಿ ನನಗಿಲ್ಲ. ದಯವಿಟ್ಟು ಕ್ಷಮಿಸಿ"

" ಶಕ್ತಿ ಇಲ್ಲವೇ ? ತಂದುಕೊಡುವದಿಲ್ಲವೇ ? ನಾನು ತರಿಸುತ್ತೇನೆ, ನೋಡುವಿಯಂತೆ. ಪೋಲೀಸಿಗೆ ತಿಳೀತು ಅಂದರೆ, ತನ್ನಷ್ಟಕ್ಕೆ ತಾನೇ ಬರುತ್ತೆ ಕಡಗ. ತಿಳೀತೋ ! ನೋಡಿದ–ಸಾವಿರಾರು ರೂಪಾಯಿನ ಒಡವೆ ದಕ್ಕಿಸಿಕೊಳ್ಳೋಣಾ ಅಂತ. ಅದು ದಕ್ಕುವದಿಲ್ಲಾ ! ಹೂಂ"

ಅಮ್ಮಾವರು, ಭಸ್ಮಮಾಡುವಂತಹ ದೃಷ್ಟಿಯಲ್ಲಿ ಅವನನ್ನು ನೋಡುತ್ತಾ ಹೊರಗೆ ಹೋದರು.

ವಿಚಾರಣೆಯಾಯಿತು. ನ್ಯಾಯಾಧೀಶರು ಶಿಕ್ಷೆ ವಿಧಿಸಿದರು. ಅಬ್ಬಾ! ರಾಮಣ್ಣಾ ತತ್ತರಿಸಿ ಹೋದ. ಮೈ ಬೆವರಿಟ್ಟಿತು. ತನ್ನನ್ನೇ ನಂಬಿದ ಹೆಂಡತಿ, ಮಕ್ಕಳು ಎಲ್ಲಾ ತಬ್ಬಲಿ. ರಾಮಣ್ಣನ ಎದೆಯೊಡೆಯಿತು. ಸಹಿಸಲಶಕ್ಯವಾದ ಯಾತನೆ ! ಅಯ್ಯೋ !

ರಾಮಣ್ಣನಿಗೆ ಶಿಕ್ಷೆ ವಿಧಿಸಿದ ರಾತ್ರಿ. ರಾಯರು ಹಾಸಿಗೆಯ ಮೇಲೆ ಕೂತಂತೆಯೇ ನಿಟ್ಟುಸಿರಿಟ್ಟರು. ಮನಸ್ಸಿನಲ್ಲಿ ಏನೋ ಹೇಳಲಾಗದ ವ್ಯಥೆ. ಸಂಶಯ. ಏನೊಂದೂ ಅರ್ಥವಾಗದು. ಹಾಗೆ ಯೋಚಿಸುತ್ತಾ " ಅಯ್ಯೋ ರಾಮೂ ! " ಅಂದರು. ಪಕ್ಕದಲ್ಲೇ ನಿಂತಿದ್ದ ಅಮ್ಮಾವರು, " ಏನು ಹೀಗೆ ಪೇಚಾಡುತ್ತೀರಿ ? ಸಾವಿರಾರು ರೂಪಾಯಿನ ಕಡಗಾನೂ ಕಳೆದುಕೊಂಡದ್ದೂ ಅಲ್ಲದೇ, ಆ ಕಳ್ಳನಿಗೆ ಕಣ್ಣೀರು ಬೇರೆ ಸುರಿಸಿರಿ. ಒಳ್ಳೇ ಚೆನ್ನಾ

ಗಿದೆ ನಿಮ್ಮಾಟ ” ಅಂದರು.

“ ನೀನೇನೋ ಅಂದುಬಿಟ್ಟೆ, ಅವನಿಗೆ ಶಿಕ್ಷೇನೂ ಆಗಿಹೋಯಿತು. ಆದರೂ, ರಾಮು ಕಳ್ಳಾ ಅಂದರೆ ನನ್ನ ಮನಸ್ಸು ನಂಬುವುದಿಲ್ಲ ನೋಡು.”

“ ನಂಬದೇ ಇದ್ದರೆ, ಮಹರಾಯರಾಗಿ ಕರೆದು ಕೊಂಡು ಬಂದು ಇಟುಕೊಳ್ಳಿ. ಈಗ ಮಾಡಿರೋದು ಸಾಲದು. ಇನ್ನೂ ಚೆನ್ನಾಗಿ ಉದ್ಧಾರ ಮಾಡತಾನೆ ನಿಮಗೆ. ”

“ಉದ್ಧಾರವೂ ಮಾಡೇ ಇದ್ದಾನೆ ಅನ್ನು. ನಾವಿಬ್ಬರೂ ಒಟ್ಟಿಗೆ ಖಾಯಿಲೆ ಬಿದ್ದೆವಲ್ಲಾ, ಆಗ ಜ್ಞಾಪಿಸಿಕೋ: ರಾಮು ಏನು ಅಲ್ಪಸ್ವಲ್ಪ ಸೇವೆ ಮಾಡಿದಾನೆಯೋ ನಮಗೆ ? ಅವನು ಮಾಡದೇ ಇದ್ದರೆ ಆಗ ಗತಿ ಯಾರಿದ್ದರು ? ಇಷ್ಟರ ಮೇಲೆ ಕಳ್ಳತನ ಮಾಡೋನು, ಆಗ ಮನೇಲಿ ರೋದನ್ನೆಲ್ಲಾ ದೋಚಿಕೊಂಡು ಹೋಗಿದ್ದರೆ ಯಾರಿಗೆ ತಿಳಿಯುತ್ತಿತ್ತು ? ಒಂದು ಹುಲ್ಲು ಕಡ್ಡಿ ಹಾಳಾಗದಂತೆ ಜೋಪಾನ ಮಾಡಿಟ್ಟಿದ್ದಾನೆ ಯಲ್ಲಾ? ಅವನ್ನ ಹೇಗೆ ಕಳ್ಳ ಅನ್ನೋದು ? ”

“ ಇದು ಕಲಿಯುಗಾಂದರೇ ಕಲಿಯುಗಾ. ಯಾರನ್ನು ಯಾರು ನಂಬೋಕೆ ಆಗುತ್ತೆ ? ಅವನೂ ಪಕ್ಕಾ ಕಳ್ಳಾ ! ಅದಕ್ಕೆ ನಂಬಿಸಿ ಮೋಸ ಮಾಡಿದ. ಅದು ಗೊತ್ತೇ ನಿಮಗೇ ? ”

‘ ನೀನು ಏನೇ ಅನ್ನು. ರಾಮುವಿನ ಗುಣ ದೊಡ್ಡದು. ಅವನೇನೋ ಬಡವ. ಆದರೆ, ಮಾನಿಷ್ಟ. ಅವನು ಹೀಗೆ ಮಾಡಿದ ಅಂದರೆ ? ಯಾಕೋ ನಾವು ಮಾಡಿದ್ದು ಅನ್ಯಾಯ ಅನ್ನಿಸುತ್ತೆ. ಅಯ್ಯೋ ಪಾಪ! ಎಂಥಾ ಶಿಕ್ಷೆ! ರಾಮೂ !!”

‘ ಒಡವೆ ಹೋಯಿತಲ್ಲಾ ಅಂತ ಯೋಚನೇ ಇಲ್ಲ. ಶಿಕ್ಷೆ ಆಯಿತಲ್ಲಾ ಕಳ್ಳನಿಗೇ ಅಂತ ಅಳುತ್ತೀರಲ್ಲಾ, ಏನು ಹೇಳಲಿ ! ಹೊತ್ತು ಹೋಗದು ನಿಮಗೆ. ಸುಮ್ಮನೆ ಮಲಗಬಾರದೇ ? ”

“ ರಾಮೂ, ಕಳ್ಳತನ ! ಹೇಗೆ ನಂಬಲಿ ? ಹಸು ಮಗುವಿನಂತಹ ರಾಮು ಹೀಗೆ ಮಾಡಿದನೇ ? ಏನೋ ಅಚಾತುರ್ಯ ನಡೆದಿರಬೇಕು. ಮನೆಯಲ್ಲೆಲ್ಲಾ ಇನ್ನೊಂದು ಸಾರಿ ಹುಡುಕಿ ನೋಡಿದಿಯೋನೇ ? ”

“ ನೀವೇ ನೋಡಿದಿರಲ್ಲಾ, ಇನ್ನೇನು ? ”

" ಏನು ಹಾಳು ಪ್ರಪಂಚ, ಒಂದೂ ಅರಿವಾಗುವದಿಲ್ಲ. "

ರಾಯರು, ಯೋಚಿಸಿ ಏನೊಂದೂ ಬಗೆಹರಿಯದೆ ದಿನರಾತ್ರಿಗಳನ್ನು ಕಳೆಯುತ್ತಿದ್ದರು

ರಾಮಣ್ಣನನ್ನು ನೆನೆದಂತೆಲ್ಲಾ ರಾಯರ ಮನಸ್ಸು ಕಲಕುವುದು. ಹೀಗಾಗಿ ಮನೋರೋಗವು ಬಂದೊದಗಿತು. ಶರೀರವು ಕುಗ್ಗಿ ಖಾಯಿಲೆಗೀಡಾಯಿತು. ಅಮ್ಮಾವರು, ರಾಮಣ್ಣನನ್ನು ಕಳ್ಳನೆಂದು ಎಷ್ಟು ರುಜವಾತು ಮಾಡಿಕೊಟ್ಟರೂ, ರಾಯರಿಗೆ ನಂಬಿಕೆ ಬಾರದು. " ಏನೋ ಮಾಡಿಬಿಟ್ಟಿದ್ದೇನೆ. " ಎಂದು ಕೊಳ್ಳುವರು.

ರಾಮಣ್ಣ ಇಂದು ಬೀದಿಯ ಭಿಕಾರಿ. ಭಿಕಾರಿಗಾದರೂ ಒಂದು ಮಾರ್ಗವಿದೆ. ರಾಮಣ್ಣನಿಗೆ ಅದೂ ಇಲ್ಲವೆನ್ನಬಹುದು. ಯಾರ ಮನೆಯಲ್ಲೂ ಕೆಲಸಕ್ಕೆ ಸೇರಿಸರು. ಮಾತು ಸಹ ಆಡಿಸರು. ಎಲ್ಲರಿಗೂ ಭಯ. ಏಕೆ ? ರಾಯರ ಮನೆಯಲ್ಲಿ ಕದ್ದವನು ರಾಮಣ್ಣ !

ರಾಮಣ್ಣ ತನ್ನಲ್ಲಿದ್ದ ಅಲ್ಪ ಸ್ವಲ್ಪ ಹಣ, ನಗನಟ್ಟು ಮಾರಿ ಹೆಂಡತಿ ಮಕ್ಕಳಿಗೆ ಅಂಬಲಿ ಗಂಜಿ ಕಾಸಿ ಹೊಯ್ದ. ಈಗ ಅದೂ ಮುಗಿಯಿತು. ಒಪ್ಪತ್ತಿನ ಕೂಳಿಗೂ ಗತಿ ಇಲ್ಲವಾಯಿತು. ಮಾಡುವುದೇನು ? ಉಪವಾಸ, ಅರೆ ಹೊಟ್ಟೆ. ಹಸಿವು ತಡೆಯಲಾರದೆ, ಕೈಗೆ ಸಿಕ್ಕಿದ್ದನ್ನೆಲ್ಲಾ ತಿಂದು, ಮನೆ ಮಂದಿ ಎಲ್ಲ ಖಾಯಿಲೆ ಬಿದ್ದಿದ್ದಾರೆ. ಎಲ್ಲರ್ಗಿಗೂ ಸಂಕಟ. ರಾಮಣ್ಣನಾದರೂ ಏನು ತಂದು ಕೊಟ್ಟಾನು ! ಮಕ್ಕಳು " ಅಮ್ಮಾ ಸಂಕಟ, ಅಯ್ಯೋ!" ಅಂದಾಗ ರಾಮಣ್ಣನ ಎದೆ ಬಿರಿಯುವುದು. ಕುಡಿಸಲು ಹಾಲೆಲ್ಲಿದೆ ? ಒಂದು ಗುಟುಕು ನೀರನ್ನೇ ಕುಡಿಸುವನು. ತನ್ನ ಹಿಂದಿನ ಸಂತಸದ ದಿನಗಳು, ಅಪಾದನೆ, ಶಿಕ್ಷೆ, ಇಂದಿನ ತನ್ನ ಕರುಣಾಜನಕ ದೃಶ್ಯ ಎಲ್ಲವನ್ನೂ ನೆನೆನೆನೆದು ದುಃಖಪಡುತ್ತಾ ' ಭಗವಂತಾ ! ನೀನು ನ್ಯಾಯಪಕ್ಷಪಾತಿ ಎನ್ನುವುದು ದಿಟವೇ ? ಹಾಗಾದರೆ, ನನಗೇಕೆ ಇಂಥ ದುಃಖದ ಸಂಕಟವನ್ನು ತಂದೊಡ್ಡಿರುವೆ? ದೀನ ಬಂಧು ! ಕರುಣಾ ನಿಧಿ ! ಕೃಪೆಮಾಡು. ಇನ್ನಾದರೂ ಈ ಸಂಕಟದಿಂದ ಪಾರುಮಾಡು ತಂದೇ !" ಎಂದು ದೇವರಿಗೆ ಮೊರೆ ಇಟ್ಟು ಕಣ್ಣೀರಿಡುತ್ತಿದ್ದಾನೆ.

೦ ೦



ಬಾಗಿಲಲ್ಲಿ ಏನೋ ಸಪ್ಪಳ! ರಾಮಣ್ಣ ಕತ್ತೆತ್ತಿ ನೋಡಿದ. ಒಳಗೆ ಬಂದವರು ರಾಯರು ಮತ್ತು ಅಮ್ಮಾವರು. ರಾಮಣ್ಣ ಬೆಚ್ಚಿದ, ಹಿಂದೆ ಸರಿದ. ಮತ್ತೇನು ಸಂಭವಿಸಿತೋ ಎಂದು. ಅವನಿಗೆ ಬರಸಿಡಿಲು ಬಡಿದಂತಾಯಿತು. ಆದರೆ ಆದದ್ದೇನು ? ರಾಯರು ಮತ್ತು ಅಮ್ಮಾವರು ಬಂದು ಅವನನ್ನು ಕಂಡು ಕೈಮುಗಿದು "ರಾಮೂ! ರಾಮಣ್ಣಾ! ನಮ್ಮನ್ನು ಕ್ಷಮಿಸು. ತಪ್ಪು ನಿನ್ನದಲ್ಲಾ, ನಮ್ಮದು, ! ರಾಮೂ, ನಮ್ಮದು"ಎಂದರು. ರಾಮಣ್ಣ ಬೆರಗಾದ. ಒಂದೂ ಅರ್ಥವಾಗಲಿಲ್ಲ. ಆದರೂ "ರಾಯರೇ ನಾನು ತಪ್ಪಿತಸ್ಥ, ದ್ರೋಹಿ. ನೀವು ನನ್ನ ತಂದೆ ತಾಯಿಗಳಂತೆ ನನ್ನನ್ನು ಕ್ಷಮಿಸಿಬಿಡಿ" ಎಂದು ದೂರ ದೂರ ಸರಿದ.

"ಇಲ್ಲ ರಾಮಣ್ಣಾ ! ತಪ್ಪು ನಮ್ಮದೇ. ಕಡಗ ಮನೆಯಲ್ಲೇ ಸಿಕ್ಕಿತು. ಅನ್ಯಾಯವಾಗಿ ನಿನ್ನನ್ನು ಈ ಗತಿಗೆ ತಂದೆವು. ನಿನಗೆ ಶಿಕ್ಷೆ ಆದಂದಿನಿಂದ ರಾಯರು ಹಾಸಿಗೆ ಹಿಡಿದರು. ನಾವು ಮಾಡಿದ್ದು ಅನ್ಯಾಯ ಅಂದರು. ನಾನು ಒಪ್ಪಲಿಲ್ಲ. ನೀನೆ ಮಾಡಿದ್ದೂ ಅಂತಾ ಸಾಧಿಸಿದೆ. ಅವರಿಗೆ ಇನ್ನೂ ಕಾಯಿಲೆ ಹೆಚ್ಚಾಯಿತು."

"ಅಯ್ಯೋ ಪಾಪ, ಅವರು ನನಗಾಗಿ ಖಾಯಿಲೆ ಬೀಳಬೇಕಾಯಿತೇ?"

"ರಾಮೂ! ಖಾಯಿಲೆ ಹೆಚ್ಚಾದುದನ್ನು ಕೇಳಿ ನನ್ನ ತಂಗಿ ಬಂದಿದ್ದಳು. ಅವಳು ಉಪ್ಪಿನಕಾಯಿ ತೆಗೆಯುವದಕ್ಕೆ ಅಂತ ಜಾಡಿಯಲ್ಲಿ ಕೈ ಹಾಕಿದಾಗ ಕಡಗ ಸಿಕ್ಕಿತು. ಕಾಣದೆ ಮಾಡಿಬಿಟ್ಟೆವು, ಕ್ಷಮಿಸು."

"ಭಗವಂತಾ! ದಯಾಮಯ!! ಸದ್ಯ ಅಪಕೀರ್ತಿ ತಪ್ಪಿತೇ!!!"

"ಅವತ್ತು ಮಂಗಳದ ದಿವಸ ನೀನು ಉಪ್ಪಿನಕಾಯಿ ತೆಗೆದುಕೊಡಿ ಬಡಿಸುವದಕ್ಕೆ, ಅನ್ನಲಿಲ್ಲವೆ? ಆಗ ತೆಗೆಯೋಕೆ ಅಂತ ಕೈಯಾಡಿಸಿದಾಗ ಕಡಗ ಎಲ್ಲೊ ಜಾರಿಕೊಂಡು ಬಿದ್ದಿದೆ. ಗೊತ್ತಾಗಲಿಲ್ಲ. ಊಟದೆಲೆ ಹತ್ತಿರ ಇಟ್ಟೆಹಾಗೆ ಜ್ಞಾಪಕ ಅಂದುಬಿಟ್ಟು ನಿನ್ನ ತಲೆ ಮೇಲೆ ತಂದುಬಿಟ್ಟೆನಲ್ಲೋ ರಾಮೂ? ನನಗೆ ಯಾವ ಶಿಕ್ಷೆ ವಿಧಿಸುತ್ತಾನೋ ದೇವರು? ಅಯ್ಯೋ,!"

"ಅಮ್ಮಾ! ನೀವು ಅಳಬೇಡಿ. ಅದೆಲ್ಲಾ ನನ್ನ ಕರ್ಮ ಹಾಗೆ ಮಾಡಿಸಿತು. ನೀವೇ ನಮ್ಮ ತಾಯಿ.ಮಿಂಚಿಹೋದುದಕ್ಕೆ ಮಾಡುವದೇನು? ದೇವರು ದಯಾಮಯ. ನಿಮ್ಮನ್ನು ಕ್ಷಮಿಸುತ್ತಾನೆ. ಅಮ್ಮಾ !"

" ರಾಮೂ, ಆದದ್ದು ಆಗಿಹೋಯಿತು. ಹಿಂದಿನದೆಲ್ಲವನ್ನೂ ಮರೆತುಬಿಡು. ನೀನೇ ನನ್ನ ಮಗ ಅಂತ ತಿಳಿದಿದ್ದೇನೆ. ನಿನ್ನ ಸಂಸಾರ ಸಮೇತ ಬಂದು ನಮ್ಮ ಮನೆಯಲ್ಲಿ ಇದ್ದುಬಿಡು. ನಿನ್ನದೇ ಮನೆ ಬಾಗಿಲು ಅಂತಾ ತಿಳಿದುಕೋ. "

" ರಾಯರೇ ! ನಿಮ್ಮ ಹೃದಯ ದೊಡ್ಡದು. ಅದನ್ನು ನಾನು ಚೆನ್ನಾಗಿಬಲ್ಲೆ. ಆದರೂ ಬೇಡ. ನಾನು ಬಡವ. ನಿಮ್ಮ ಆಶೀರ್ವಾದದಿಂದ ಎಲ್ಲಿಯಾದರೂ ಬದುಕಿರುತ್ತೇನೆ. ಇನ್ನು ಬೇಡ "

" ರಾಮಣ್ಣಾ! ಭಯಪಡಬೇಡ. ನಮ್ಮ ಮನೆಗೆ ಬಾ. ನೀನೇ ನಮ್ಮನೇ ದೇವರಪ್ಪಾ. ರಾಯರು ಸ್ವಲ್ಪವೂ ಅನುಮಾನವಿಟ್ಟಿರಲಿಲ್ಲ. ಇಂದಿಗೂ ಇಟ್ಟಿಲ್ಲ. ತಪ್ಪೆಲ್ಲಾ ನನ್ನದು. ನನ್ನ ಮಗೂ ಅಂತಾ ತಿಳಕೋತೇನಿ. ಬಾ! ರಾಮೂ! "

" ರಾಯರೇ ! ಅಮ್ಮಾ! ನಿಮ್ಮ ಮನೆ ಸೇರಿದಂದಿನಿಂದ ನಿಮ್ಮನ್ನೇ ತಂದೆತಾಯಿ ಎಂದು ಭಾವಿಸಿದ್ದೇನೆ. ದೇವರು ನಿಮ್ಮನ್ನು ಕಾಪಾಡಲಿ ! "

# ಅವಳಿ ಮಕ್ಕಳು

ಶಾಲೆಯ ಕೊನೆಯ ಗಂಟೆಯಾಯಿತು. ಗೂಡಿನಿಂದ ಬರುವ ಬಣ್ಣ ಬಣ್ಣದ ಹಕ್ಕಿಗಳಂತೆ, ರಂಗು ರಂಗಿನ ಉಡುಗೆ ತೊಡುಗೆಯ ಬಾಲಬಾಲಿಕೆಯರು ಶಾಲೆಯಾವರಣದಿಂದ ಹೊರಬಿದ್ದರು. ಅದೇನು ನಗು! ಅದೇನಾನಂದ !! ಮೂರು ನಾಲ್ಕು ಗಂಟೆಗಳಿಂದ ಕಟ್ಟಿಗೆ ಸಿಕ್ಕಿದ ಅವರ ಬಾಯಿ, ಈಗ ಕಟ್ಟೊಡೆದು ಹರಿಯಿತು. ಮಾತಿನ ಮುಖ್ಯ ವಿಷಯ ಮರುದಿನದ ದೊಡ್ಡ ಹಬ್ಬವಾದರೂ, ಇಡೀ ದಿನ ರಜಕೊಡದೆ,"ಮಾರ್ನಿಂಗ್ ಸ್ಕೂಲ್" ಮಾಡಿದ್ದುದೇ ಆಗಿತ್ತು. ಪದ್ಮ ತನ್ನ ಗೆಳತಿ ಫಾತಿಮಳಿಗೆ ಹೇಳಿದಳು. " ಲೇ ಫಾತಿಮಾ ! ನಮ್ಮ ತಾಯಿ ಬೆಳಿಗ್ಗೆ ಶಾಲೆಗೆ ಕಳಿಸುತ್ತಾರೋ ಇಲ್ಲವೋ ಕಾಣೆ, ಕಣೆ. " ಫಾತಿಮಾ ಹೇಳಿದಳು : " ಬೆಳಿಗ್ಗೆ ಬರಲಿಕ್ಕೇನೇ ನಿನಗೆ ? ಮಧ್ಯಾಹ್ನಕ್ಕೆ ತಾನೇ ಲಡ್ಡೂ, ಬಿಡ್ಡೂ ? "

" ಹೌದೇ. ಊಟ ಮಧ್ಯಾಹ್ನವೇ ಆದರೆ ಪೂಜೆ ಬೆಳಿಗ್ಗೇನೇವಮ್ಮಾ. ದೊಡ್ಡ ಹಬ್ಬ ನಾಳೆ ಗೊತ್ತೇನು ? "

" ಏನು ಹಬ್ಬ ಅದು ? "

" ವರಮಹಾಲಕ್ಷ್ಮಿ ಹಬ್ಬ. "

" ಲಕ್ಷ್ಮಿ '' ಎಂದರೆ ಯಾರು ? ಕೈನಲ್ಲಿ ಸಿತಾರು ಹಿಡಕೊಂಡು...."

" ಅಲ್ಲಲ್ಲಾ, ನೀನ್ಯೊಬ್ಬಳು ಮೊದ್ದೂ ಅಂದರೆ ಮೊದ್ದು. ನೀನು ಹೇಳತಿರೋದು ಸರಸ್ವತಿ. ವೀಣೆ ಬಾರಿಸ್ತಿದಾಳೆ, ಸೀತಾರಲ್ಲಾ. ಲಕ್ಷ್ಮೀ ತಾವರೆ ಕಮಲದಲ್ಲಿ ನಿಂತಿರ್ತಾಳೆ. "

" ಹೋ ಹೋ ! ತಿಳೀತು. ಕೈನಲ್ಲಿ ಕೂಡ ಹೂಗಳೂ; ಅದೂ ? "

" ಹೂಂ, ಹೂಂ, ಅವಳೇ, ಅವಳೇ, "

" ವರ್ಮಾಲಕ್ಷೂಮಿ ಎಂದರೇನು ? "

" ವರ್ಮಾ ಅಲ್ಲವೇ. ವರಮಹಾಲಕ್ಷ್ಮೀಂತ "

" ಅಂದರೆ ? "

" ಅಂದರೆ ವರ ಕೊಡುವ ಲಕ್ಷ್ಮಿ ಅಂತ "

" ಹಾಗಾದರೆ, ನಾಳೆ ನಿಮಗೆಲ್ಲ ವರ ಕೊಡ್ತಾಳೇ ? "

" ನಾವು ಭಕ್ತಿಯಿಂದ ಪೂಜೆ ಮಾಡಿದರೆ ಕೊಡ್ತಾಳಂತೆ. "

" ನೀವು ಮಾಡಿದರೆ ಕೊಡ್ತಾಳೆ. ನಾವು ಮಾಡಿದರೆ ? "

" ನಿಮಗೂ ನಿನ್ನೆ ಹಿಂದಿ ಟೀಚರ್ ಹೇಳಲಿಲ್ಲವೇ ? ದೇವರಿಗೆ ಎಲ್ಲರೂ ಒಂದೇ ಅಂತ ! ಮರೆತುಬಿಟ್ಟೇನು ? "

" ಹೌದೌದು ಗಾಂಧೀಜಿಪಾಠದಲ್ಲಿ. ಮತ್ತೆ....ಖಾದೀನೇ ಕೊಂಡು ಕೊಳ್ಳಿ. ಬಡವರಿಗೆ ಸಹಾಯವಾಗುತ್ತೆ. ಅಂದಿದ್ರಲ್ಲಾ ? "

" ಹೌದಮ್ಮಾ, ಅವರೇನೋ ಅಂದಿದ್ರು. ನಮ್ಮ ತಂದೆಗೆ ಹಬ್ಬಕ್ಕೆ ಖಾದೀ ಲಂಗಾನೆ ಹೊಲಿಸಿ ಕೊಡಿ ಅಂದಿದ್ದೇನೆ. "

" ಅಂದಿದ್ದಿ ! ಸುಮ್ಮನಿರು ಬುರುಡೆ ಬಿಡಬೇಡ, ನಾಳೆ ನೋಡು! ಜರತಾರಿ ಲಂಗ ಹಾಕೊಂಡು 'ಸರ್ ಪರ್ ' ಓಡಾಡತ್ತಿರ್ತಿ "

"ಹೌದು ಕಣೇ, ನಿನಗೇನು? ನಿಮ್ಮಪ್ಪ, ಅಮ್ಮ ಎಲ್ಲಾ ಖಾದೀನೇ ಹಾಕ್ಕೋತಾರೆ. ನಿನಗೂ ಹೊಲಿಸ್ತಾರೆ. ನಮ್ಮನೇಲಿ ನಮ್ಮ ತಂದೇನೂ

ಹಾಕ್ಕೋಳೋದಿಲ್ಲ ನಮ್ಮ ತಾಯಿಗಂತೂ ಅದನ್ನು ಕಂಡರೆ ಆಗೋಲ್ಲ. ನಾನೆಷ್ಟು ಹೇಳಿದರೂ ಒಬ್ಬರೂ ಕಿವಿಗೆ ಹಾಕ್ಕೋಳೊಲ್ಲ. ನಾನೇನ್ಮಾಡ್ಲಿ ಹೇಳು ''

ಪದುಮಳ ಮುಖದಲ್ಲಿ ಸಿಟ್ಟು,ವ್ಯಸನ ಮೂಡಿದ್ದುದನ್ನು ಫಾತಿಮಾ ಕಂಡುಕೊಂಡಳು. ತಾನು ಹಾಗೆ ಹಂಗಿಸಬಾರದಿತ್ತು ಎಂದುಕೊಂಡಳು. ಗೆಳತಿಯ ಭುಜದ ಮೇಲೆ ಕೈಯಿಟ್ಟು ಹೇಳಿದಳು: " ಅದು ಹೋಗಲಿ ಕಣೆ. ನಾನೂ ಬರಲಾ ನಿಮ್ಮ ಪೂಜೆಗೆ ನಾಳೆ ? ''

ಪದ್ಮಳ ಮುಖದಲ್ಲಿ ನಗೆ ಮೂಡಿತು. ಉತ್ಸಾಹದ ದನಿಯಲ್ಲಿ " ಓಹೋ ! ಬಾ. ನಿಜವಾಗಿಯೂ! ಸುಳ್ಳಲ್ಲಾ. ನಾನು ಕರಿಯೋಕೆ ಬರ್ತೀನಿ ನಿನ್ನ. ಆಂ ?''. ಫಾತಿಮಾ ಸಮ್ಮತಿ ಸೂಚಿಸಲು ತಲೆಯಲ್ಲಾಡಿಸಿದಳು. ಈ ಹೊತ್ತಿಗೆ ಅವರಿಬ್ಬರೂ ರಸ್ತೆಯ ಕೊನೆಗೆ ಬಂದಿದ್ದರು. ಪದ್ಮ ಅಡ್ಡ ತಿರುಗಿದಳು. ಫಾತಿಮಾ ಮುಂದೆ ಸಾಗಿದಳು.

o o o o

ಪದ್ಮ,ಫಾತಿಮಾ ನೋಡುವವರ ಕಣ್ಣಿಗೆ ಅವಳಿ ಮಕ್ಕಳು. ಮೂರೇ ತಿಂಗಳಲ್ಲಿ ಅದೆಷ್ಟು ಸ್ನೇಹ ! ಅದೆಷ್ಟು ಸಲಿಗೆ !

ಫಾತಿಮಾಳ ತಂದೆ ಊರಿನ ಪ್ರಮುಖ ವಕೀಲರು. ಮೇಲಾಗಿ ಸ್ಥಳೀಯ ಕಾಂಗ್ರೆಸ್ ಕಾರ್ಯದರ್ಶಿಗಳು. ಅವರ ಮನೆಗೆ ಮನೆಯೇ ಗಾಂಧೀಜಿಯವರ ಮಾತಿಗೆ ಶಿರಬಾಗಿ ನಡೆಯುತ್ತಿತ್ತು.

ಅವರ ಮನೆಯಲ್ಲಿ ಎಲ್ಲರೂ ಖಾದಿ ಧರಿಸುವವರೇ.

ಫಾತಿಮಾಳ ತಾಯಿ, ಫಾತಿಮಾ, ಪದ್ಮ ಒಟ್ಟಿಗೆ ಮನೆಗೆ ಬಂದಾಗ ಪತ್ರಿಕೆಗಳಲ್ಲಿನ ಸಮಾಚಾರ ಬಿಡಿಸಿ ಹೇಳುವರು. ದೇಶಕ್ಕಾಗಿ ಗಾಂಧಿ, ನೆಹರು, ಪಟೇಲ್, ಸರೋಜಿನಿ ನಾಯುಡು ಇವರೆಲ್ಲಾ ಹೇಗೆ ತಮ್ಮ ಸರ್ವಸ್ವವನ್ನೂ ಧಾರೆಯೆರೆಯುತ್ತಿದ್ದಾರೆ ಎಂಬುದನ್ನು ಆ ಎಳೀ ಮೆದುಳಿನಲ್ಲಿ ನಾಟುವಂತೆ ಹೇಳುತಿದ್ದರೆ ಫಾತಿಮಾ " ಮಾ! ಮಾ! ನಾನೂ ಈ ಸಾರಿ ಚಳವಳಿಯಲ್ಲಿ ಸೇರಿಬಿಡ್ತೇನೆ "ಎಂದು ಎದೆ ತಟ್ಟಿಕೊಳ್ಳುವಳು. ಆದರೆ ಪದ್ಮಳ ಬಾಯಿಂದ ಮಾತೇ ಹೊರಡುತ್ತಿರಲಿಲ್ಲ. ಕಣ್ಣುಗಳು ಮಾತ್ರ ಹನಿಯೂಡುವವು. "ನಮ್ಮಮ್ಮನೂ ಹೀಗೆ ಇರಬಾರದಿತ್ತೇ ?" ಎಂದು

ಕೊಳ್ಳುವಳೋ ಏನೋ ! ಹೆಚ್ಚು ನಿಲ್ಲದೆ ಮನೆಗೆ ಹೊರಟುಹೋಗು ವಳು.

ಪದ್ಮಳ ತಂದೆ ತಹಸೀಲ್ದಾರರು. ಈ ಊರಿಗೆ ವರ್ಗವಾಗಿ ಬಂದು ಕೆಲವೇ ದಿನವಾಗಿತ್ತು ಅವರಲ್ಲಿ ದೇಶಭಕ್ತಿ ಗುಪ್ತಗಾಮಿನಿಯಾಗಿತ್ತು. ಹೊಟ್ಟೆಯ ಪಾಡು, ದೇಶ ಭಕ್ತಿಯ ಬಗ್ಗೆ ಹೊರಹೊಮ್ಮದಂತೆ ಮಾಡಿತ್ತು. ಅವರು, ' ರಿಟೈರ್ ' ಆದ ಮೇಲಾದರೂ ಖಾದಿಯನ್ನೇ ಧರಿಸಬೇಕೆಂದು ಮನಸ್ಸು ಮಾಡಿದ್ದರು.

ಪದುಮಳ ತಾಯಿಗಾದರೋ ಈ ಲೋಕದಲ್ಲಿ ಏನು ನಡೆಯುತ್ತಿದೆ ಎಂಬ ಪರಿವೆಯಿಲ್ಲ. ತಿಳಿದುಕೊಳ್ಳಬೇಕೆಂಬ ಆಸೆ ಮೊದಲೇ ಇಲ್ಲ. ಅವ ರಾಯ್ತು, ಅವರ ಸಡಗರವಾಯ್ತು. ಪದ್ಮಳಿಗೆ ಘಾತಿಮಳ ಮನೆಯಿಂದ ತಲೆಯಲ್ಲಿ ತುಂಬಿ ತಂದದ್ದನ್ನು ತಾಯಿಯ ಮುಂದೆ, ಹೇಳಬೇಕೆಂವಾಶೆ ಇದು ಅವರಿಗೆಲ್ಲಿ ಉಚಿಸೀತು.? ಆದರೂ ಮಗಳ ಮನಸ್ಸು ನೊಂದೀ ತಲ್ಲಾ ಎಂದು, " ಬಾರಮ್ಮಾ, ಆ ಕತೇನೆಲ್ಲಾ ಆ ಮೇಲೆ ನಿಧಾನವಾಗಿ ಹೇಳುವಿಯಂತೆ. ಕಾಫಿ ತಿಂಡಿ ಎಲ್ಲಾ ಆರಿ ಹೋಗ್ತಿದೆ" ಎನ್ನುತ್ತ ಬೇರೆ ಕೆಲಸಕ್ಕೆ ತೊಡಗುವರು ಪದ್ಮಳ ಮನಸ್ಸು ಇದರಿಂದ ಬೇಸರಗೊಳ್ಳು ವದು. " ಹೋಗಮ್ಮಾ ನಿನ್ನ ತಿಂಡಿ ಯಾರಿಗೆ ಬೇಕು ? '' ಎನ್ನುವಳು. ತಾಯಿ ನೋಲುವರು. ಮಗಳ ಸಮಾಧಾನಕ್ಕಾಗಿ " ಅದೇನು ಹೇಳ್ಬೇಕೂ ಅಂತಿದ್ದಿಯೋ " ತಿಂಡಿ ತಿಂತಾನೇ ಹೇಳು ಮಗೂ, ಕೇಳ್ತೀನಿ" ಎಂದು ಮಗಳ ಮಾತಿಗೆ " ಹೂ" ಗುಟ್ಟುವರು.

ಜಾನಕಮ್ಮನವರು ಹೆತ್ತ ಆರು ಮಕ್ಕಳಲ್ಲಿ, ಉಳಿದಿದ್ದವಳು ಪದ್ಮ ಒಬ್ಬಳೇ. ಆವಳೇ ಅವರ ಜೀವನ ಸರ್ವಸ್ವ. ಆವಳು ನಕ್ಕರೆ ಆವರಿಗಾ ನಂದ, ಅವಳತ್ತರೆ ಅವರ ಕಣ್ಣಿಗೆ ಕತ್ತಲು. ಅವಳು ನಾಗರತ್ನವನ್ನು ಬಯಸಿದರೂ " ಇಲ್ಲ"ವೆನ್ನರು ಆದರೆ ಮಗಳು ಖಾದೀ ಲಂಗ ಕೇಳಿದರೆ ಮಾತ್ರ ಅವರು ಮೈ ಪರಚಿಕೊಳ್ಳುವರು. ಅವಳಿಗೆ ದಿನಕ್ಕೊಂದು ಬಣ್ಣದ ರೇಶಿಮೆಯ ಲಂಗವನ್ನೇ ಉಡಿಸುವರು, ಮೈ ತುಂಬಾ ಒಡವೆ ಇಟ್ಟು, ತಲೆ ತುಂಬಾ ಹೂ ಮುಡಿಸಿ ನೋಡುವರು. ಮರುಕ್ಷಣವೇ ಉಪ್ಪು ಮೆಣ ಸಿನಕಾಯಿ ನಿವಾಳಿ ತೆಗೆಯುವರು.

ಫಾತಿಮಾಳ ಮನೆಯಲ್ಲಿ ಗಾಂಧೀ ತತ್ವಗಳಿಗೆ ತಮ್ಮ ತಾಯಿ ಸ್ವಭಾವವನ್ನು ಹೋಲಿಸಿಕೊಂಡಾಗ ಪದ್ಮ, ತಾಯಿ ವಿಚಾರದಲ್ಲಿ ಬೇಸರ ಗೊಳ್ಳುವಳು. ಆದರೆ, ಮನೆಗೆ ಬಂದಾಗ ತಾಯಿ ಮಮತೆಗೆ ಬಾಗಿ ಹೋಗುತ್ತಿದ್ದಳು.

ಹಬ್ಬ ಹರಿದು ಬಂದಿತ್ತು. ಮಹಾಲಕ್ಷ್ಮಿಯ ಬರುವಿಕೆಗಾಗಿ ಮನೆಯೂ ಶೃಂಗರಿಸಿಕೊಂಡಿತ್ತು ಮನೆಯಲ್ಲೆಲ್ಲಾ ಸುಗಂಧದ ವಾಸನೆ ಆವರಿಸಿಕೊಂಡಿತ್ತು. ಪಡಸಾಲೆಯ ನಡುವೆ ಪೂಜಾ ಮಂಟಪ ಸಿದ್ಧವಾಗಿತ್ತು. ಜಾನಕಮ್ಮನವರು ನಾನಾ ವಿಧದ ಫಲ ಪುಷ್ಪಗಳನ್ನು ತಟ್ಟೆತಟ್ಟೆಗಳಲ್ಲಿ ಸಿದ್ಧಪಡಿಸುತ್ತಿದ್ದರು. ಪದ್ಮ ನವಿಲು ಬಣ್ಣದ ಜರಿಯ ಲಂಗ ಉಟ್ಟು, ತಾಯಿ ಹಿಂದೆ ಮುಂದೆ ಓಡಾಡುತ್ತಿದ್ದಳು. ಮಗಳನ್ನು ನೋಡಿ ತಹಸೀಲ್‌ದಾರರು ಹೆಂಡತಿಯನ್ನು ಕರೆದು "ಲೇ! ನನಗೊಂದು ಅನುಮಾನ ಬಂದಿದೆಯಲ್ಲಾ" ಅಂದರು. ಜಾನಕಮ್ಮನವರು "ಅದೇನೊಂದ್ರೆ ಅಂಥಾ ಅನುಮಾನ?'' ಎಂದರು.

"ಅಲ್ಲಾ, ಮಹಾಲಕ್ಷ್ಮಿ ಮಂಟಪದಲ್ಲಿರೋಳೋ ಅಥವಾ, ನಿನ್ನ ಹಿಂದೆ ಮುಂದೆ ಓಡಾಡೋಳು ನಮ್ಮ ಮಹಾ ಲಕ್ಷ್ಮಿಯೋ?"

"ಹೇಗೂ ಸರಿ. ಮಂಟಪದಲ್ಲಿರೋಳು ಜಗತ್ತಿಗೇ ಮಹಾಲಕ್ಷ್ಮಿ. ನನ್ನ ಹಿಂದೆ ಮುಂದೆ ಓಡಾಡೋಳು ನಮ್ಮ ಮಹಾ ಲಕ್ಷ್ಮಿ" ಎಂದು ಮಗಳ ಕಡೆ ವಾತ್ಸಲ್ಯದ ದೃಷ್ಟಿ ಬೀರಿದರು.

ಪೂಜೆ ಆಯಿತು. ಬ್ರಾಹ್ಮಣ ಸುವಾಸಿನಿಯರಿಗೆ ಮೃಷ್ಟಾನ್ನ ಭೋಜನವೂ ಆಯಿತು. ಪದ್ಮ ಮಾತ್ರ ಬೀದಿಯ ಜಗುಲಿಯ ಮೇಲೆ ನಿಂತು ಎಂಜಲೆಲೆಗಾಗಿ ನಾಯಿಗಳ ಜೊತೆ ಹೋರಾಡುತ್ತಿರುವ ಭಿಕಾರಿಗಳನ್ನೆ ನೋಡುತ್ತಿದ್ದಳು. ತಾಯಿ ಬಂದು ಊಟಕ್ಕೆ ಕರೆದಾಗ ಏನೋ ಹೇಳಬೇಕೆಂದಿದ್ದವಳು ಸುಮ್ಮನೆ ಒಳಗೆ ಹೋಗಿ ಬಿಟ್ಟಳು. ಪದ್ಮ ಎಲೆಯ ಮುಂದೇನೋ ಕೂತಳು. ಅವಳು ಕೈ ತೊಳೆಯಲೆದ್ದಾಗ ಬಡಿಸಿದೆಲೆ ಬಡಿಸಿದಂತೆಯೇ ಇತ್ತು.

ಬಿಸಿಲು ಇಳಿಮುಖವಾಗಿತ್ತು. ತಾಯಿ ಮಗಳಿಗೆ ಜಡೆ ಹೆಣೆದು, ಹೂ ದಂಡೆ ಮುಡಿಸುತ್ತಾ "ಹೋಗಮ್ಮಾ ಚಿನ್ನಾ, ಹೊಸ ಲಂಗ

ಹಾಕ್ಕೊ" ಎಂದರು ಪದ್ಮ ಒಂದೇಟಿಗೆ ಕೋಣೆಗೆ ಹಾರಿದಳು. ತಂದೆಗೆ ಹೇಳಿ ಹೊಲಿಸಿ ತರಿಸಿದ್ದ ಖಾದೀ ಲಂಗವನ್ನು ಹಾಕಿಕೊಂಡು ಹೊರಗೆ ಬಂದಳು. ಮಿತಿಮೀರಿದುತ್ಸಾಹ ಮುಖದಲ್ಲಿ ಸೂಸುತ್ತಿತ್ತು. ತಾಯಿ ನೋಡಿದರು ಮಗಳನ್ನು. ಅವರಿಗೇನೋ ವ್ಯಥೆಯಾಯಿತು ಅವ ರೆಂದರು "ಅಯ್ಯೋ ನಮ್ಮಮ್ಮಾ! ವರ್ಷಾವಧಿ ಹಬ್ಬದ ದಿನ ಈ ಗೋಣಿ ತಟ್ಯಾಕೆ ಸುತ್ತಿಕೊಂಡೆಯೇಮ್ಮಾ?". ಈ ಮಾತನ್ನು ಕೇಳಿದೊಡನೆ ಪದ್ಮಳ ಮುಖದ ಮೇಲೆ ತಣ್ಣೀರೆರಚಿದಂತಾಯಿತು. ಅವಳೆಂದಳು "ಅದ್ಯಾ ಕಮ್ಮಾ ಗೋಣಿತಟ್ಟು ಅಂತೀಯೇ? ಇದು ಶುದ್ಧ ಖಾದೀ"

"ಖಾದಿಯೋ ಗೀದಿಯೋ? ಬಿಚ್ಚಾಕಮ್ಮಾ! ನೋಡಲಾರೆ ಕಣ್ಣಿಂದ. ಪೆಟ್ಟಿಗೆ ತುಂಬ ಲಂಗ ಇಟ್ಟುಕೊಂಡು ನಿನಗೇನು ಗ್ರಹಚಾರವೇ ?"

"ಹೌದಮ್ಮ. ನನಗೇನೊ ಪೆಟ್ಟಿಗೆ ತುಂಬ ಲಂಗವಿವೆ. ಆದರೆ ನಮ್ಮ ದೇಶದಲ್ಲಿ ಎಷ್ಟೋ ಜನಕ್ಕೆ ಬಟ್ಟೇನೆ ಇಲ್ಲವಂತೆ. ಮಧ್ಯಾಹ್ನ ಕಚ್ಚಾಡು ತ್ತಿರಲಿಲ್ಲವೇ, ಅವರಿಗೆ...."

"ಅದೆಲ್ಲಾ ಅವರ ಜನ್ಮಾಂತರ ಪದ್ಮಾ. ಅದಕ್ಕೆ ನಾವೇನು ಮಾಡೋಕಾಗುತ್ತೆ. ನೀನು ಈ ಒರಟು ಬಟ್ಟೆ ಹಾಕ್ಕೊಂಡರೆ ಅವರಿಗೆ ಬಟ್ಟೆ ಬಂದ ಹಾಗಾಯಿತೇ?"

"ಅಲ್ಲಮ್ಮಾ, ನಾವು ಖಾದಿ ಕೊಂಡುಕೊಂಡರೆ ಬಡವರಿಗೆ ತುಂಬಾ ಸಹಾಯವಾಗುತ್ತೇ ಅಂತ ಗಾಂಧೀಜೀ ಹೇಳ್ತಾರೆ ಕಣಮ್ಮಾ."

ಗಾಂಧಿಜಿಯವರ ಹೆಸರು ಕೇಳುತ್ತಲೇ ಜಾನಕಮ್ಮನವರು ಕೆರಳಿ ದರು. "ಹೋಗೇ, ಹೇಳಿದರೆ ಹೇಳ್ಕೋತಾನೆ. ಕೇಳೋರು ಕೇಳ್ಕೋತಾರೆ. ನಮಗೇನವೆಲ್ಲಾ ಕಟ್ಟಿಕೊಂಡು. ಹೋಗು, ಬೇರೆ ಲಂಗ ಹಾಕಿಕೊಂಡು ಒಂದ್ಯೆದಾರು ಮನೆಯವರನ್ನು ಅರಸಿನ ಕುಂಕುಮಕ್ಕೆ ಕರೆದು ಬಾ."

ತಾಯ ಮಾತು ಪದ್ಮಳನ್ನು ಬೇಸರಗೊಳಿಸದಿರಲಿಲ್ಲ. ಅವಳ ಮನಸ್ಸು ಮತ್ತಿಷ್ಟು ಹಠಕ್ಕೆ ನಿಂತಿತು.

"ಇಲ್ಲಮ್ಮಾ, ನಾನಿದನ್ನೇ ಹಾಕಿಕೊಂಡಿರ್ತೇನೆ. ನನಗಿನ್ಯಾವ ಲಂ ಗಾನೂ ಬೇಡೇ ಬೇಡ."

ತಾಯಿಗೆ ಏನು ಹೇಳಲೂ ತೋರಲಿಲ್ಲ. ಅವರೆಂದರು: "ಏನಾದ್ರೂ,

ಮಾಡಿಕೊಳ್ಳಮ್ಮಾ ನಿನ್ನಿಷ್ಟ ಬಂದೋರೂ ಹೋದೋರೂ ಈ ಬಟ್ಟೆ ನೋಡಿ ನನ್ನ 'ಛೀ' ಅಂತಾರೆ, ನಿನಗೇನು ಗೊತ್ತಾಗುತ್ತೆ. "

ಈಗ ಪದ್ಮಳಿಗೆ ಸಿಟ್ಟಿಗೆ ಬದಲಾಗಿ ಕಣ್ಣೀರು ಬಂದಿತು. ಮಗಳ ಕಣ್ಣೀರು ತಾಯ ಹೃದಯವನ್ನೇನೋ ಕಲಕಿತು. ಪ್ರೀತಿ ತುಂಬಿ ಬಂತು. ಆದರೂ ಖಾದಿ ಲಂಗಕ್ಕೆ ಅಂದಿನ ಪೂರ್ತಿ ಬಹಿಷ್ಕಾರವನ್ನೇ ಹಾಕಿ. " ಪದ್ಮಾ, ಈ ಲಂಗ ಹಾಕ್ಕೋಬೇಡಾಂತ ನಾನನ್ನೋದಿಲ್ಲ. ಹಾಕ್ಕೊ. ಆದರೆ ಇವತ್ತಿನ ಸಂಜೆಗೆ ಆರತಕ್ಷತೆ ಆಗೋತನಕ ಬೇಡಮ್ಮಾ. ಆ ಮೇಲೆ ಹಾಕ್ಕೋ. ಬೇಕಾದರೆ ನಾಳೆಯೆಲ್ಲಾ ಹಾಕ್ಕೊಂಡಿರು". ಪದ್ಮ ಶೋಕ ದನಿಯಲ್ಲಿ " ಹಾಗಾದರೆ ಈ ಲಂಗ ಬಿಚ್ಚಲೇ ಬೇಕೇನಮ್ಮಾ? "

" ಹೂಂ ಚಿನ್ನಾ, ಬಿಚ್ಚಿಬಿಡು. ಬೆಳಿಗ್ಗೆ ಹಾಕ್ಕೊಂಡಿದ್ದನ್ನೇ ಹಾಕ್ಕೊಂಡು ಬಾ, ಹೋಗು."

ಪದ್ಮ ಮನಸ್ಸಿಲ್ಲದ ಮನಸ್ಸಿನಿಂದ ಲಂಗ ಬದಲಾಯಿಸಿದಳು. ಆಗ ತಾಯ ಮುಖ ಅರಳಿತ್ತು " ಇದೀಗ ಚೆನ್ನ, ಮುಖ ನೋಡೋ ಹಾಗಾಯ್ತು. ಸದ್ಯ ಹೋಗು. ಸಂಜೆಯಾಗುತ್ತೆ. ಪೋಲೀಸ್ ಸೂಪರಿಡೆಂಟರ ಮನೆ, ತಹಸೀಲ್ದಾರರ ಮನೆ, ವಕೀಲ್ ರಾಮರಾಯರ ಮನೆ, ಡಾಕ್ಟರರ ಮನೆ, ಇಷ್ಟು ಕರೆದು ಬಾ."

" ಮೇಷ್ಟ್ರು ಕಮಲಮ್ಮನ ಮನೆ ? "

" ಅವಳಿಗೆ ಮಧ್ಯಾಹ್ನವೇ ಹೇಳಿಬಿಟ್ಟಿದ್ದೇನೆ. ಬರತಾಳೆ. ನೀನೇನೂ ಕರೆಯೋಕೆ ಹೋಗ್ಬೇಡ. "

" ಬಾಕಿಯೋರಿಗೂ ಮಧ್ಯಾಹ್ನವೇ ಹೇಳಿಬಿಡಬೇಕಿತ್ತು."

" ದೊಡ್ಡ ಮನುಷ್ಯರಿಗೆ ಹಾಗೆ ಹೇಳ್ತಾರೇನಮ್ಮಾ? ನಿನಗೆ ಯಾಕೆ ತಿಳುವಳಿಕೆ ಇಲ್ಲವೋ ನಾನು ಕಾಣೆ." ಪದ್ಮಳ ಮನಸ್ಸಿನಲ್ಲಿ "ಅಮ್ಮ ಯಾಕೆ ಹೀಗೆ ಪಕ್ಷಪಾತ ಮಾಡುತ್ತಾಳೆ. " ಎಂದುಕೊಳ್ಳುತ್ತಾ ಹೊರಟಳು. ಆಗ ಅವಳಿಗೆ ತಟ್ಟನೆ ಫಾತಿಮಳ ನೆನಪಾಯ್ತು. ಆದರೆ ? ಅವಳ ಮನೆಗೆ ಹೋಗಲು ಸಾಧ್ಯವಿಲ್ಲ. ತಾನುಟ್ಟಿದ್ದುದು ಕಲಾಬತ್ತಿನ ಲಂಗ, ಉಡುತ್ತೇನೆಂದು ಹೇಳಿದ್ದುದು ಖಾದೀ ಲಂಗ. ಇದು ಅವಳಿಗೆ ಅವಮಾನದ ಸಂಗತಿಯಾಗಿತ್ತು. " ಇವತ್ತು ಫಾತಿಮಾ ಬರದಿದ್ದರೆ ಸಾಕಪ್ಪಾ ದೇವರೇ"

ಎಂದುಕೊಂಡಳು. ತಾಯಿ 'ಕರೆ' ಎಂದು ಹೇಳಿದ ಮನೆಯನ್ನೆಲ್ಲಾ ಕರೆದು, 'ಕರೆಯಬೇಡ ಎಂದು ಹೇಳಿದ್ದ ಮೇಷ್ಟ್ರ ಕಮಲಮ್ಮನ ಮನೆಯನ್ನೂ ಕರೆದೇಬಿಟ್ಟಳು. ನಂತರ ಮನೆಯತ್ತ ಹೆಜ್ಜೆ ಹಾಕಿದಳು.

೦ ೦ ೦ ೦

ಗೆಳತಿ ಬಂದಾಳೆಂದು ಫಾತಿಮಾ ದಾರಿನೆ ೋಡಿದಳು. ಬರಲಿಲ್ಲ. ಕೊನೆಗೆ ಅವಳು "ನಾನು ಬರದಿದ್ದರೂ ನೀನು ಬರಲೇಬೇಕು." ಎಂದಿದ್ದಾಳೆ. ಪಾಪ! ತುಂಬಾ ಕೆಲಸ.ಹೇಗೂ ಮನೆ ಗೊತ್ತಿದೆ. ಹೋಗಿಬಿಡೋಣ ಎಂದುಕೊಂಡು ಹೊರಟಳು. ಮನೆಯ ಬಾಗಿಲಲ್ಲಿ ತನ್ನನ್ನು ಎದುರು ನೋಡುತ್ತಿದ್ದಾಳೇನೋ ಎಂದುಕೊಂಡರೆ, ಅಲ್ಲಿಯೂ ಗೆಳತಿ ಕಾಣ ಸಿಗಲಿಲ್ಲ. ಜಾನಕಮ್ಮನವರು ದೇವಿಯ ಮುಂದೆ ಆರತಿಗೆ ಅಣಿ ಮಾಡುತ್ತಿದ್ದರು. ಫಾತಿಮಾ ಅವರ ಬಳಿ ಹೋಗಿ "ಪದ್ಮಾ ಎಲ್ಲಿ ?" ಎಂದಳು ಜಾನಕಮ್ಮ ತಲೆ ಎತ್ತಿ ನೋಡಿದರು. ಹುಡುಗಿ ನಿಂತಿದ್ದಾಳೆ. ಮೈ ಬಣ್ಣ ಗುಲಾಬಿ. ಉಟ್ಟಿರುವುದು ಪಾಯಿಜಾಮಾ. ಷರಟು. ಹಣೆಯಲ್ಲಿ ಬೊಟ್ಟಿಲ್ಲ. "ಯಾರಮ್ಮಾ ನೀನು ?" ಎಂದರು.

"ನಾನು ಪದುಮಾ ಜೊತೆಗಾತಿ"

"ಜೊತೆಗಾತಿ ಸರಿ. ನೀನ್ಯಾರ ಮಗಳು."

"ನಾನು ರಹೀಮುಖಾನರ ಮಗಳು."

"ಖಾನ್" ರ ಹೆಸರು ಕೇಳುತ್ತಿದ್ದಂತೆಯೇ ಅವರಿಗೆ ಏನೋ ಆಗಿಬಿಟ್ಟಂತಾಯಿತು. "ಅಯ್ಯೋ ಮುಸಲ್ಮಾನರೇನಮ್ಮಾ ? ಇಲ್ಲಿತನಕ ಬಂದುಬಿಟ್ಟೆ ? ಏನು ಕತೆ ? ಚೆನ್ನಾಯ್ತು. ಸ್ವಲ್ಪ ಹಿಂದಕ್ಕೆ ನಡೆಯಮ್ಮಾ. ಆ ಬಾಗಿಲ ಹತ್ರ ನಡಿ. ನಾನು ಅಲ್ಲೇ ಬರ್ತೀನಿ." ಎನ್ನುತ್ತ ದಡದಡನೆ ತಾವೇ ಬಾಗಿಲ ಹತ್ತಿರಕ್ಕೆ ಬಂದುಬಿಟ್ಟರು. ಫಾತಿಮಾಗೆ ಏನೂ ತೋಚಲಿಲ್ಲ. ತಾನು ಬಾಗಿಲಿಗೆ ಬಂದು "ಪದ್ಮಾ ಎಲ್ಲಿ ಹೋಗಿದ್ದಾಳೆ ?" ಎಂದಳು. ಅವರು "ಎಲ್ಲೋ ಹೋಗಿದ್ದಾಳೆ. ಬರ್ತಾಳೆ. ಬಂದರೂ ಅವಳಿಗೆ ನಿನ್ನ ಜತೆ ಮಾತಾಡೋಕೆ ಇವತ್ತು ಪುರಸೊತ್ತಾಗೋಲ್ಲ. ನಮ್ಮನೇಲಿ ಪೂಜೆ ಗಲಾಟೆ ಇವತ್ತು. ನೀನು ಹೋಗು. ಇನ್ನೊಂದಾದರು ಬಾ. ಏನಮ್ಮಾ ?"

ಅವರ ಮಾತು ಪೂರ್ತಿಯಾಗುವಷ್ಟರಲ್ಲಿ ಫಾತಿಮಾ ಮೆಟ್ಟಿಲನ್ನಿಳಿ

ಯುತ್ತಿದ್ದಳು. ಅದೇ ಹೊತ್ತಿಗೆ ಕರೆಯಲು ಹೋದ ಪದ್ಮ ಮನೆ ಬಾಗಿಲಿಗೆ ಬಂದಳು ಬಂದವಳೇ " ಫಾತಿಮಾ!" ಎಂದು ಅವಳ ಕೈ ಹಿಡಿದುಕೊಂಡಳು. ಫಾತಿಮಾಳ ಕಣ್ಣಿಂದ ತಟತಟನೆ ನೀರಿಳಿಯುತ್ತಿತ್ತು. ಪದ್ಮ ಗಾಬರಿಯಿಂದ " ಫಾತಿಮಾ ! ಏನಾಯ್ತು? ಬಾ ಒಳಗೆ " ಎಂದು ಕೈ ಹಿಡಿದು ಎಳೆದಳು ಅವಳು " ಬರುವದಿಲ್ಲ. " ವೆಂದು ತಲೆಯಲ್ಲಾಡಿಸಿ ಹೊರಟೇ ಬಿಟ್ಟಳು. ಪದ್ಮ ಅಲ್ಲೇ ನಿಂತಿದ್ದ ತಾಯಿಗೆ " ಏನಂದೆಯಮ್ಮಾ ನನ್ನ ಗೆಳತೀಗೆ ? ನಾನೇ ಅವಳನ್ನು ಕರೆದಿದ್ದೆ " ಎಂದಳು . ದನಿಯಲ್ಲಿ ಕೋಪ, ವಿಷಾದ ತುಂಬಿತ್ತು. ಜಾನಕಮ್ಮನವರು ಏನೂ ನಡೆಯಲಿಲ್ಲಲ್ಲೆಂಬಂತೆ" ನೀನು ಕರೆದಿದ್ದಿ ಅಂತ ನಾನೇನು ಬಲ್ಲೆನಮ್ಮಾ? ಒಳ್ಳೆಯದಾಯಿತು. ಕರಿ. ಕೂಡಿಸು " ಎಂದರು. ಪದ್ಮ " ಫಾತಿಮಾ " ಎಂದು ಕೂಗುತ್ತಾ ಅವಳ ಹಿಂದೆಯೇ ಹೋಗಿಬಿಟ್ಟಳು.

ಪಡಸಾಲೆಯಲ್ಲಿ ಕುಳಿತಿದ್ದ ಮುತ್ತೈದೆಯರು, ನಡೆಯುತ್ತಿದ್ದ ಪ್ರಸಂಗವನ್ನು ಕಣ್ಣಿಟ್ಟು ನೋಡುತ್ತಿದ್ದರು. ಕಿವಿಗೊಟ್ಟು ಕೇಳುತ್ತಿದ್ದರು. ಆಗಲೇ ವಿಷಯದ ಮೇಲೆ ಚರ್ಚೆಯೂ ಪಿಸು ಮಾತಿನಲ್ಲಿ ಪ್ರಾರಂಭವಾಗಿತ್ತು. ಜೋಯಿಸರ ವೆಂಕಮ್ಮ " ಯಾರಂತೆ ಆ ಹುಡುಗಿ ? " ಎಂದು ಜಾನಕಮ್ಮನವರನ್ನು ಕೇಳಿದರು. ಜಾನಕಮ್ಮ ತಮ್ಮ ಸಂಪ್ರದಾಯ ಪ್ರದರ್ಶಿಸುತ್ತಾ ' ಯಾರೋ, ಏನು ಮಣ್ಣೋ, ಯಾರಿಗ್ಗೊತ್ತೂಂದ್ರೆ, ಎಲ್ಲಿದೋ ಮುಸಲ್ಮಾನರದ್ದಂತೆ. ಆ ಹೆಣ್ಣಿನ ಧೈರ್ಯ ನೋಡಿದಿರಾ? ದೇವರ ತನಕ ಸಲೀಸಾಗಿ ಬಂದುಬಿಟ್ಟಿತಲ್ಲಾ ಹಾಳು ಹುಡುಗಿ " ಎಂದರು.

" ಕಾಲ ಕೆಟ್ಟು ಹೋಯಿತಿರೀ ! ಯಾರೇನು ಮಾಡ್ತಾರೆ "? ಮುದುಕಿಯೊಬ್ಬರು ದನಿಗೂಡಿಸಿದರು.

" ಅಯ್ಯೋ, ಇನ್ನೂ ಚಿಕ್ಕ ಹುಡುಗಿ, ತಿಳೀದೂ " ಮತ್ತೊಬ್ಬರು ರಾಗ ಎಳೆದರು.

"ಏನ್ಮಾಡುದೂಂದ್ರೆ, ನಮ್ಮ ಹುಡುಗೀನೇ ಎಡವಟ್ಟು. ಯಾವತ್ತು ಯಾರನ್ನು ಕರಿಯಬೇಕು, ಯಾರನ್ನು ಬಿಡಬೇಕು ಅನ್ನೊ ತಿಳುವಳಿಕೇನೆ ಇಲ್ಲ . ನಿನ್ನೆ ಇಂದಲೂ ವ್ರತ ಸಾಂಗವಾಗಬೇಕೂಂತ, ನಾನೆಷ್ಟು ಕಷ್ಟ ಪಟ್ಟಿದ್ದೆನೋ ಆ ಮಹಾ ತಾಯಿಗೇ ಗೊತ್ತು. ಹುಡುಗಿ, ಶೀರಾ ಲಕ್ಷ್ಮೀ

ದೇವಿ ಮಂಟಪದ ಹತ್ತಿರಕ್ಕೆ ಬಂದುಬಿಟ್ಟಿತ್ತು. ಎಷ್ಟು ಮೈಲಿಗೆ ಆಯಿತೋ ಏನೋ."

ಜಾನಕಮ್ಮನವರ ಈ ಪೇಚಾಟವನ್ನು ನೋಡಿ ಡಾಕ್ಟರ್ ಹೆಂಡತಿ ಸುಶೀಲಮ್ಮನವರಿಂದ ಸುಮ್ಮನಿರಲಾಗಲಿಲ್ಲ ಆಕೆ ಮಹಿಳೆಯರ ಮನದಲ್ಲಿ ಮನೆ ಮಾಡಿರುವ ಮೂಢ ಸಂಪ್ರದಾಯಗಳನ್ನು ಮರೆಸಿ, ಅದನ್ನು ಆಧುನಿಕ ವಿಚಾರಗಳಿಂದ ತುಂಬಿಸಬೇಕೆಂದು ಸತತ ಪ್ರಯತ್ನ ಪಡಿಸುತ್ತಿದ್ದರು. ಫಾತಿಮಾ ಬಂದು ಹೋದುದನ್ನು ಕಂಡಾಗಲೇ ಅವರ ರಕ್ತಕ್ಕೆ ಬಿಸಿ ಏರಿತ್ತು. ಜಾನಕಮ್ಮನವರ ಮಾತು ಕೇಳಿ ಮತ್ತಿಷ್ಟು ಕುದಿಯ ಹತ್ತಿತು. ಅವರೆಂದರು; " ಜಾನಕಮ್ಮನವರೇ ದೇವರಿಗೆ ಮೈಲಿಗೆ ಉಂಟೆ ? ಬೆಂಕಿಗೆ ಚಳಿ ಹಿಡಿಯುವದುಂಟೆ? "

ಜಾನಕಮ್ಮನವರು ಕೆರಳಿದರು. "ಉಂಟೂ ಅಂದರೆ ಉಂಟು. ಇಲ್ಲಾ ಅಂದರೆ ಇಲ್ಲಾ. ಸುಶೀಲಮ್ಮಾ , ನಿಮಗೇನಂತೆ ? ಎಲ್ಲಾ ಬಿಟ್ಟವರು. ಎಲ್ಲಾ ಸರಿ ಹೋಗುತ್ತದೆ. ನಾವಿನ್ನೂ ದೇವರು, ದಿಂಡರು, ಮಡಿ, ಮೈಲಿಗೆ ಕಟ್ಟಿ ಕೊಂಡಿದ್ದೇವಲ್ಲ ! ಏನ್ಮಾಡ್ಬೇಕೂಂತಿರಿ ? "

" ಸಿಟ್ಟಾಗಬೇಡಿ ಜಾನಕಮ್ಮಾ, ನಾನು ಹೇಳೋದನ್ನು ಸ್ವಲ್ಪ ಮನಸ್ಸಿಗೆ ತೆಗೆದುಕೊಳ್ಳಿ. ನಾವೂ ದೇವರನ್ನು ಬಿಟ್ಟೋರಲ್ಲ ಅವನನ್ನ ಬಿಡಲಿಕ್ಕೆ ಸಾಧ್ಯವೂ ಇಲ್ಲ. ಆದರೆ, ಈ ಅಣುರೇಣು ತೃಣಕಾಷ್ಟದಲ್ಲಿ ಅಡಗಿರುವ ಭಗವಂತನಿಗೆ ಮೈಲಿಗೆ ಎಂದರೇನು ? ಈ ಜಾತಿ, ಮತ ಇವೆಲ್ಲಾ ಅವನು ಬಂದು ನಮಗೆ ಮಾಡಿಕೊಟ್ಟು ಹೋಗಿಲ್ಲ. ನಾವು ನಾವೇ ಕಟ್ಟಿಕೊಂಡದ್ದು ಯೋಚಿಸಿ ನೋಡಿದರೆ, ಅದರಲ್ಲಿ ಅರ್ಥವೇ ಇಲ್ಲ. "

" ಚೆನ್ನಾಗಿ ಹೇಳಿದಿರೀ ಅಂದರೆ ! ಅರ್ಥವಿಲ್ಲವಂತೆ ಅರ್ಥ! ಅರ್ಥವಿಲ್ಲದೇನೇ ಅವರು ಕುರುಡುದಾರಿಯಲ್ಲಿ ನಡೆದರು. ದಾರಿ ಚೆನ್ನಾಗಿತ್ತು. ಸರಿ ಹೋಯಿತು. ನಮ್ಮ ಮುಂದಿನ ದಾರಿ, ಹಳ್ಳತಿಟ್ಟುಗಳಿಂದ ತುಂಬಿದೆ. ನಾವೂ ಅವರಂತೆ ಕಣ್ಣುಮುಚ್ಚಿ ನಡೆದರೆ ಬೀಳುವದು ಹಳ್ಳಕ್ಕೇ ಸರಿ. ಈಗ ನೋಡಿ ಆ ಹುಡುಗಿ, ಇಲ್ಲಿ ಬಂದುದರಿಂದ ಆಗಿರುವ ನಷ್ಟವಾದರೂ ಏನು? ದೇವರೇನೋ ಎದ್ದು ಓಡಿ ಹೋಗಲಿಲ್ಲ. ಮಂಟಪದಲ್ಲೇ ಇದೆ. ಅಥವಾ

ನಿಮ್ಮ ಮಗಳ ಮೇಲೇನಾದರೂ ಬಾಸುಂಡೆಗಳೆದ್ದಿವೆಯೇ ? ಹಾಗೂ ಆ ಹುಡುಗಿ ಏನಾದರೂ ಹೊಸದಾಗಿ ಹತ್ತಿರ ಬಂದಿದ್ದರೆ ಅಸಹ್ಯ ಬರೋ ಹಾಗಿದ್ದಳೇ ? ಶುಭ್ರವಾದ ಖಾದಿ ಹಾಕ್ಕೊಂಡು ಹುಡುಗಿ ನಗುನಗುತಾ ಬರುತಿದ್ದರೆ, ಹತ್ತಿರ ಕರೆದು ಕೂಡಿಸಿ ಕೊಳ್ಳೋಣ ಅನ್ನಿಸಿತ್ತು. ಅಷ್ಟರಲ್ಲಿ ನೀವು ಅಳಿಸಿ ಮಹಾಲಕ್ಷ್ಮೀ ಪೂಜೆ ಮಾಡಿದರೆ, ಆಕೆಗೆ ಪ್ರೀತಿ ಆದೀತೇ ಜಾನಕಮ್ಮನವರೇ ? ”

ಅಲ್ಲಿ ಕೂತಿದ್ದವರೆಲ್ಲಾ ಸುಶೀಲಮ್ಮನವರ ಮಾತುಗಳನ್ನು ಬೆರಗಾಗಿ ಕೇಳುತ್ತಿದ್ದರು. ಈ ಮಾತುಗಳಿಗೆ ಉತ್ತರವೇ ಇರಲಿಲ್ಲವೇನೋ ? ಜಾನಕಮ್ಮನವರು ದೊಡ್ಡದಾಗಿ ಸಿಟ್ಟುಸಿರ ಬಿಟ್ಟು “ ವೆಂಕಮ್ಮನೋರೆ ಅಷ್ಟು ಆರತಿಶಾಸ್ತ್ರ ಮುಗಿಸಿ ಬಿಡೀಂದ್ರೆ ” ಎಂದರು ಹಾಡಿಲ್ಲ. ಹಸೆಯಿಲ್ಲ. ಯಾಂತ್ರಿಕವಾಗಿ ಆರತಿ ನಡೆಯಿತು. ಆರತಿ ಮಾಡುವಾಗ ಜಾನಕಮ್ಮನವರಿಗೆ ಮಂಟಪದಲ್ಲಿ ಮಹಾಲಕ್ಷ್ಮಿ ಇದ್ದಂತೆಯೇ ಕಾಣಲಿಲ್ಲ. ಬಹುಶಃ ಹೊರಗೆ ಹೋದ ‘ ಮಹಾಲಕ್ಷ್ಮಿ’ ’ಯನ್ನು ಕಾಣುತಿತ್ತೇನೋ.

○ ○ ○ ○

ತಹಸೀಲ್‌ದಾರರು ಮನೆಗೆ ಬಂದಾಗ ಪಡಸಾಲೆ ಬರಿದಾಗಿತ್ತು. ಜಾನಕಮ್ಮನವರು ಮಾತ್ರ ಗೋಡೆಗೊರಗಿ, ಮುಖ ತಗ್ಗಿಸಿ ಕುಳಿತಿದ್ದರು. ಪದ್ಮಳ ಸುಳಿವೇ ಇಲ್ಲ. “ ಪದ್ಮಾ ಎಲ್ಲಿ ? ” ಎಂದು ಕೇಳಿದರು. ಜಾನಕಮ್ಮನವರು “ಎಲ್ಲೋ ಸ್ನೇಹಿತೆ ಮನೆಗೆ ಹೋಗಿಬಿಟ್ಟಿದ್ದಾಳೆ. ಮನೆಗೇ ಬಂದಿಲ್ಲ ” ಎಂದರು.

“ ಮನೆಗೇ ಬಂದಿಲ್ಲಾ ! ಹಾಗೆಂದರೇನೇ ? ಅಗಲೆ ಒಂಭತ್ತಕ್ಕೆ ಬಂತು. ಆಳನ್ನ ಕಳಿಸಲಿಲ್ಲವೇ ? ”

“ ಕಳಿಸಿದ್ದೆ ‘ ಬರೋಲ್ಲಾ ’ ಅಂದಳಂತೆ ”

“ ಯಾಕೆ ? ಯಾರ ಮನೆಗೆ ಹೋಗಿದ್ದಾಳೆ ? ”

“ ಯಾರೋ, ರಹೀಮ್ ಸಾಹೇಬರ ಮನೆಗಂತೆ. ಸಂಜೆ ಯಾಕೋ ಏನೋ ಆ ಹುಡುಗಿ ಬಂದಿತ್ತು. ಇಲ್ಲಿಗೆ “ತೀರಾ ದೇವರ ತನಕ ಬರಬೇಡಮ್ಮಾ. ಸ್ವಲ್ಪ ಹಿಂದಕ್ಕೆ ನಿಲ್ಲು. ” ಅಂದಿದ್ದೇ ತಪ್ಪಾಯ್ತು. ಆ ಹುಡುಗಿ ಹೊರಟು ಹೋಯ್ತು. ಅದರ ಬೆನ್ನು ಹಿಡಕೊಂಡು ಇವಳೂ ಹೊರಟು

ಹೋದಳು. ಎಷ್ಟು ಕರೆದರೂ ಬರಲಿಲ್ಲ. ಯಾಕೆ ಹೀಗೆ ಮಾಡ್ತಾಳೋ ಇವಳು ಏನೋ. ”

ತಹಸೀಲ್‌ದಾರರಿಗೆ ಎಲ್ಲಾ ತಿಳಿಯಿತು. ಮನಸ್ಸಿಗೆ ಬೇಸರವೂ ಆಗಿ ‘ ಅವಳೇನ್ಮಾಡ್ತಾಳೇ ? ನಿನ್ನ ತಿಳುವಳಿಕೆ ಇಷ್ಟರ ಮಟ್ಟಿಗೆದ್ರೆ! ಆ ಹುಡುಗೀನ್ನ ಯಾಕೆ ಹೋಗೂಂದೆ ? ’’

“ಇಲ್ಲಾಂದ್ರೆ, ನಾನು ಆ ಹುಡುಗೀನ್ನ ಸತ್ಯವಾಗೂ, ಹೋಗೂ ಅನ್ನ ಲಿಲ್ಲ. ಸ್ವಲ್ಪ ಅತ್ಲಾಗೆ ಹೋಗಮ್ಮ ಅಂದೆ. ಇಷ್ಟಕ್ಕೆ”

“ ನಾಂದೇನು? ಬುದ್ಧಿ ಇರೋ ಮಕ್ಕಳಿಗೆ ? ನಿನ್ನ ಮೂಗಿನ ನೇರಕ್ಕೆ ನೀನು ಮಾತಾಡ್ತೀಯೋ ಹೊರತು, ಮತ್ತೊಬ್ಬರ ವಿಚಾರ ಯೋಚನೆ ಮಾಡೋದೆ ಇಲ್ಲ. ಆ ಹುಡುಗಿ ಮನೆಯವರೆಲ್ಲ ಕಾಂಗ್ರೆಸ್ಸಿಗೆ ಸೇರಿ ಬಿಟ್ಟಿದ್ದಾರೆ. ಜಾತಿ ಮತ ಮರೆತು, ದೇಶಸೇವೆ ಮಾಡ್ತಿದಾರೆ. ಆದ್ದ ರಿಂದ ಆ ಹುಡುಗೀಗೆ ನಿನ್ನ ಜಾತಿ, ನೀತಿ ಒಂದೂ ಒಂದೂ ಗೊತ್ತಿಲ್ಲ. ಏನೋ ಸ್ನೇಹಿತಳ ಮನೆ ಅಂತ ಸಲೀಸಾಗಿ ಬಂದಿದ್ದಳು. ಅಷ್ಟಕ್ಕೆ ನೀನು ಇಷ್ಟು ರಂಪ ಮಾಡ್ಬೇಕೆ ? ”

“ ಏನೋ ಆದದ್ದು ಆಯಿತಲ್ಲಾ. ಬಿಡಿ. ಈಗ ಈ ಹುಡುಗಿ ಹೋಗಿ ಅವರ ಮನೇಲಿ ಕೂತು ಬಿಟ್ಟಿದೆಯಲ್ಲಾ! ಇದಕ್ಕೇ ನಾನ್ಮಾಡೋದ್ಹೇಳಿ ? ”

“ ಏನ್ಮಾಡ್ತಿಯೋ ಮಾಡು. ಪುಣ್ಯಕ್ಕೆ ನಮ್ಮ ಪದ್ಮ ನಿನ್ನ ಹಾಗೆ ಆಗತಾ ಇಲ್ಲವಲ್ಲ. ಅದೇ ನನಗೊಂದು ಸಮಾಧಾನ. ಅವಳೆದೆಯಲ್ಲಿ ದೇವರು, ದಯೆ, ಸ್ನೇಹ ತುಂಬಿ ಕಳಿಸಿದ್ದಾನೆ. ನಿಜವಾಗಲೂ ಅವಳೇ ನಮ್ಮ ಮನೇಗೆ ಮಹಾಲಕ್ಷ್ಮಿ. ಅವಳನ್ನು ಮೊದಲು ಸಂತೋಷ ಪಡಿಸು, ಹೋಗು. ನೀನ್ನೇ ಸಮಾಧಾನ. ಹೇಳಿ ಕರ್‍ಕೊಂಡು ಬಾ ”

“ಏನೂಂದ್ರೆ ? ನಾನು ಹೊಗೋದೇ ಅವರ ಮನೆಬಾಗಿಲಿಗೆ.? ”

“ ಮಗಳು ಬೇಕಾಗಿದ್ರೆ ಹೋಗು. ಇಲ್ಲದಿದ್ರೆ ಬಿಡು.”

ತಹಸೀಲ್‌ದಾರರು ಕೋಣೆಯೊಳಗೆ ಹೊರಟು ಹೋದರು. ಜಾನ ಕಮ್ಮನವರ ತಲೆಯಲ್ಲಿ “ ಹೋಗಬೇಕೆ ? ಬೇಡವೇ ? ” ಎಂಬುದರ ದ್ವಂದ್ವ ಯುದ್ಧವೇ ಆಯಿತು. ತಾಯಿ ಹೃದಯ ! ಮಗಳನ್ನು ಕಾಣಲು

ಜೀವ ತುಡುಕುತ್ತಿತ್ತು. " ಅವರು ಯಾರಾದರೆ ನನಗೇನು? ನನ್ನ ಮಗು ವಿಗಾಗಿ ಹೋಗುತ್ತೇನೆ. " ಎಂಬ ನಿರ್ಧಾರಕ್ಕೆ ಬಂದವರು ಮಗಳಿಗೆ ಸಮಾ ಧಾನವಾಗಲೆಂದು, ತಟ್ಟೆಯ ತುಂಬಾ ಬಾಗಿನ ತುಂಬಿಕೊಂಡು, ಆಳಿನ ಸಂಗಡ ಫಾತಿಮಾ ಮನೆಯ ಕಡೆಗೆ ಧಾವಿಸಿದರು.

o o o o

ಫಾತಿಮಾಳ ಮನೆಯ ಹಜಾರಕ್ಕೆ ಸೇರಿದಂತೆ ಒಂದು ಕೋಣೆ. ಜಾನಕಮ್ಮ ಹಜಾರದಲ್ಲಿ ಕಾಲಿಟ್ಟಾಗ ಕೋಣೆಯಲ್ಲಿ ಕಂಡದ್ದೇನು? ಫಾತಿಮಾ ತಾಯಿ ಮಂಚದ ಮೇಲೆ ಕೂತಿದ್ದಾರೆ. ಅವರ ಕೈಗಳು ಪದ್ಮಳ ಕುತ್ತಿಗೆಯನ್ನು ಬಳಸಿಕೊಂಡಿವೆ. ಫಾತಿಮಾ ತನ್ನ ಕರವಸ್ತ್ರದಿಂದ ಅವಳ ಕಣ್ಣು ಒರಸುತ್ತಿದ್ದಾಳೆ. ಫಾತಿಮಾ ತಾಯಿ ಏನೋ ಹೇಳುತ್ತಿ ದ್ದಾರೆ.

" ಹಾಗೆಲ್ಲ ಅಳಬಾರದು ಮಗೂ. ನಿಮ್ಮ ತಾಯಿಗೇನು ಫಾತಿಮಾ ಮೇಲೆ ಕೋಪ ಇಲ್ಲ. ಆದರೆ, ಬಹಳ ದಿವಸದ್ದು ಅಭ್ಯಾಸ. ಜನ ಅಂತಾರೆ ಅಂತ ಭಯ. ಅದಕ್ಕೆಹೋಗೆಂದಿರಬೇಕು. ಅಷ್ಟಕ್ಕೆಲ್ಲಾ ಅಳತಾರೇನಮ್ಮಾ?"

ಪದ್ಮ ಏನೋ ಹೇಳುತ್ತಿದ್ದಳು. " ಪದ್ಮಾ! '' ಎಂದು ಕೂಗಿದಂ ತಾಯ್ತು. ಪದ್ಮಾ ಬೆಚ್ಚಿದಳು. ಫಾತಿಮಾ ಮಾತ್ರ '' ಮಾ! ಪದುಮಾ ತಾಯಿ ಬಂದಿದಾರೆ " ಎಂದಳು. ತಾಯಿ, ತಟ್ಟನೆ ಮಂಚದಿಂದಿಳಿದು ಬಂದು "ಬನ್ನೀಮಾ, ಒಳಗೆ ಬನ್ನಿ'' ಎಂದರು. ಫಾತಿಮಾ ಕುರ್ಚಿ ತಂದಿಟ್ಟಳು. ಅವರ ಸೌಜನ್ಯವನ್ನು ಕಂಡು ಜಾನಕಮ್ಮನವರಿಗೆ ಏನು ಹೇಳಬೇಕೆಂದೇ ತಿಳಿಯಲಿಲ್ಲ. ಅಷ್ಟರಲ್ಲಿ ಫಾತಿಮಾ ತಾಯಿ 'ಮಗಳನ್ನು ಹುಡುಕಲಿಕ್ಕೆ ಬಂದಿರಾ?' ಎಂದರು.

ಜಾನಕಮ್ಮನವರಿಗೆ ಬೇಕಾಗಿದ್ದ ಪ್ರಶ್ನೆ ಅದೇ ಆಗಿದ್ದಿತು. "ಹೌದಮ್ಮಾ, ಏನ್ಮಾಡ್ಲೀ ಹೇಳಿ. ರಾತ್ರಿ ಒಂಭತ್ತು ಘಂಟೆ ಆದರೂ ಹುಡುಗಿ ಮನೆಗೆ ಬರಲಿಲ್ಲ. ಆಳನ್ನ ಕಳಿಸಿದರೂ 'ಬರೋಲ್ಲಾ' ಅಂದಳಂತೆ. ಕಡೆಗೆ ನಾನೇ ಬರಬೇಕಾಯಿತು" ಎಂದರು.

"ತುಂಬಾ ಶ್ರಮವಾಯಿತು ನಿಮಗೆ. ನಾನೂ ಬಹಳ ಹೇಳಿದೆ. ಆದರೂ ಕೇಳಲಿಲ್ಲ. ಹೋಗಲಿ ಬಿಡಿ. ಅವಳಿಲ್ಲೇ ಇರಲಿ. ಅವಳ ಬದಲು

ನಮ್ಮ ಫಾತಿಮಾನ್ನ ನಿಮ್ಮನೇಗೆ ಕರಕೊಂಡು ಹೋಗಿ ಬಿಡಿ. ಹೋಗೇ ಫಾತಿಮಾ!" ಎಂದು ಅವಳನ್ನು ತಿವಿದರು. ಅವಳು, 'ಒಲ್ಲೆ' ಎಂದು ತಲೆಯಲ್ಲಾಡಿಸಿದಳು. ಜಾನಕಮ್ಮನವರಿಗೆ ಅರ್ಥವಾಗಿರಬೇಕು. ಅವರು "ಅದ್ಯಾಕಮ್ಮಾ, ಒಲ್ಲೇ ಅಂತಿ! ನಾನು 'ಹೋಗು' ಅಂತೇನೇ ಅಂತಲೇ? ಇಲ್ಲಾವಮ್ಮಾ? ನಾನಿನ್ಮೇಲೆ ಹಾಗನ್ನೋದಿಲ್ಲ. ಬಾ, ನಮ್ಮ ಪದ್ಮಹೇಗೋ ನೀನೂ ಹಾಗೆ ನನಗೆ 'ಬಾ. ಬರ್ತೀಯಾ?" ಎಂದು ಮತ್ತೆ ಅವಳ ತಾಯಿಯ ಕಡೆತಿರುಗಿ "ಸಂಜೆ ನಿಮ್ಮಹುಡುಗಿ ನಮ್ಮನೇಗೆ ಬಂದಿದ್ದಳು. ಏನು ಬಂತೋ ಮಾತು ನನ್ನ ಬಾಯಿಂದ ನೋಡಿಬೇಗಂನೋರೇ, ಸಿಟ್ಟು ಮಾಡಿಕೊಂಡು ಹೊರಟೇ ಬಿಟ್ಟಳು. ನಿಮ್ಮಹುಡುಗಿ ಮತ್ತೆ ಎಷ್ಟು ಕರೆದರೂ ಬರಲಿಲ್ಲ ಸರಿ, ನಮ್ಮನೇಯೋಳು ಅಳತಾ ಅವಳ ಹಿಂದೇನೇ ನಡೆದುಬಿಟ್ಟಳು" ಎಂದರು ಬೇಗಂ ಹೇಳಿದರು: "ಅವರಿಬ್ಬರೂ ಬರೇ ಸ್ನೇಹಿತರಲ್ಲಾ. ಅಕ್ಕತಂಗಿಯರಿರಬೇಕು."

"ನಾನೂ ಅದೇ ಹೇಳ್ಬೇಕು ಅಂತಿದ್ದೆ. ಅವರಿಬ್ಬರೂ ನಿಮ್ಮ ಮಕ್ಕಳೇ ಅಂದರೆ ಚೆನ್ನಾಗಿ ಒಪ್ಪುತ್ತೆ ನೋಡಿ ಬೇಗಂ. ನಿಮ್ಮ ಮನಸ್ಸು ಬಹಳ ದೊಡ್ಡದು. 'ಫಾತಿಮಾ ತಾಯಿ ಬಹಳ ಒಳ್ಳೆಯವರಮ್ಮಾ' ಎಂತ ನಮ್ಮ ಪದ್ಮ ಹೇಳತಾನೇ ಇದ್ದಳು. ಇವತ್ತು ನಾನೇ ಕಣ್ಣಿಂದ ನೋಡಿದ ಹಾಗಾಯ್ತು"

"ಬ್ಯಾಡೀಮಾ! ಇಷ್ಟು ದೊಡ್ಡ ಮಾತು ಬೇಡ ನನಗೆ"

"ಹಾಗಲ್ಲ ಬೇಗಂ! ನಿಮ್ಮಂಥವರನ್ನ ನೋಡಿದರೆ, ನಾವೂ ಒಂದು ಪಾಠ ಕಲಿತುಕೊಂಡ ಹಾಗಾಗುತ್ತೆ. ಹಾಗೇ ಅನ್ನೋದು ಇದುವರೆಗೆ ನನಗೆ ಹೊಳದೇ ಇರಲಿಲ್ಲ ಇನ್ಮೇಲಾದರೂ ಸ್ನೇಹ ಬೆಳೆಸೋಣ. ಬಿಡುವು ಮಾಡಿಕೊಂಡು ಬನ್ನಿ ನಮ್ಮ ಮನೆಗೆ"

"ಜರೂರ್ ಬರ್ತೇನೆ"

ಜಾನಕಮ್ಮನವರು ತಂದಿದ್ದ ಬಾಗಿನದ ತಟ್ಟೆಯನ್ನು ತೆಗೆದು, 'ಪದ್ಮಾ! ಈ ಬಾಗಿನ ನಿನ್ನ ಸ್ನೇಹಿತಳಿಗೆ ಕೊಡಮ್ಮಾ' ಎಂದರು. ಪದ್ಮಳ ಮುಖ ಗೆಲುವಾಯಿತು. ನಗೆ ಮೂಡಿತು. ಹಾರಿ ಬಂದು ತಟ್ಟೆಯನ್ನು ತೆಗೆದುಕೊಂಡು ಫಾತಿಮಾ ಕೈಲಿಟ್ಟಳು. ಗೆಳತಿಯರಿಬ್ಬರೂ ನಕ್ಕರು. ಬೇಗಂ

ಒಂದು ತಟ್ಟೆಯಲ್ಲಿ ಬಾಳೇಹಣ್ಣು, ಬಾದಾಮಿ, ಕಲ್ಸಕ್ರೆ ತಂದು ಜಾನಕಮ್ಮ ನವರಿಗೆ ಕೊಟ್ಟರು. ಜಾನಕಮ್ಮನವರು "ಇನ್ನಾದರೂ ಮಗಳನ್ನು ಕಳಿಸಿ ಕೊಡ್ತೀರಾ?" ಎಂದರು.

ಬೇಗಂ ನಗುತ್ತಾ "ಅವಳು ಬಂದರೆ ಕರ್ಕೊಂಡು ಹೋಗಿ" ಎಂದರು. ಎಲ್ಲರೂ ನಕ್ಕರು.

ಜಾನಕಮ್ಮ ಮಗಳೊಡನೆ ಮನೆಗೆ ಬಂದಾಗ ಬಾಗಿಲಿನಲ್ಲಿ ನಿಂತು, ಮಗಳ ದಾರಿ ನೋಡುತ್ತಾ ಇದ್ದ ತಹಸೀಲ್‌ದಾರರು ನಗುತ್ತಾ, "ಇವತ್ತು ನಮ್ಮನೇಲಿ ಪೂಜೆ. ನೀವು ಯಾವ ಜಾತಿಯವರೋ ಏನೋ. ಇನ್ನೊಂದಿನ ಬನ್ನಿ, ಹೋಗಿ" ಎಂದರು.

ಅವರ ಮಾತನ್ನು ಕೇಳಿ ಜಾನಕಮ್ಮನವರಿಗೂ ನಗು ಬಂತು. ಪದ್ಮಳ ನಗುವಿನಿಂದ ಮತ್ತೆ ಮನೆಗೆ ಕಳೆ ಬಂದಿತು.

# ಕಂದಾರಿ

"ಶಾರದಾ! ಶಾರದಾ!!"

"ಏನು?"

"ಇಲ್ಲಿ ಬಾ. ನಿನ್ನ ಸ್ನೇಹಿತೆ ಬರುತ್ತಿದ್ದಾಳೆ. ನೋಡು ಬಾ"

"ಯಾರು? ಸುಭದ್ರಾನೇ?"

"ಅಲ್ಲ, ನಿನ್ನ ಹಳೇ ಸ್ನೇಹಿತೆ"

"ಅಹಾ! ಲಲಿತಾನೇ? ಬಂದೇ."

"ಇಲ್ಲಿ ಬಂದು ನೋಡೆ. ಯಾರೂ ಅಂತ ಒಳಗೇ ನೇರಿಕೊಂಡು ಕೇಳ್ತಾಳೆ! ಬಾ ಮತ್ತೆ ಬೇಗ."

"ಎಲ್ಲಿ ಅಂದ್ರೇ?"

"ಅಲ್ಲಿ ನೋಡೆ. ಚಾಕು, ಕತ್ರಿ ತಗೊಂಡು ಬರುತಿಲ್ವೇನೇ?"

"ಅಯ್ಯೋ ಹೋಗಿ. ಒಳಗೆ ಕೆಲಸ ಮಾಡುವಾಗ ನೀವು ದೊಡ್ಡದಾಗಿ ಕೂಗಿದ್ದು ಇದಕ್ಕೆ ಏನೋ! ಅವಳೇಕೆ ನನ್ನ ಸ್ನೇಹಿತೆ ಆಗ್ತಾಳೇ?"

"ಅಲ್ಲವೇನೆ ಹೇಳೆ. ನೀನು ಅವಳ ಸ್ನೇಹಿತೆ ಆಗದಿದ್ದರೆ ಫ್ಯಾನ್ಸಿಡ್ರೆಸ್ ಕಾಂಪೀಟೀಷನ್ನಲ್ಲಿ ಫಸ್ಟ್‌ಪ್ರೈಸ್ ಹೊಡೆದಾರ ಹೊಡೀತಿದ್ದೆ ಏನೇ? ನಿನ್ನ ಸ್ನೇಹಿತೆ ಅಲ್ಲಾ ಅಂತೀಯಲ್ಲಾ."

"ಸರಿ. ನಿಮ್ಮ ಮುಂದೇನಾದರು ಹೇಳಿಬಿಟ್ಟರೆ, ಅದೇ ಹಿಡಿತೀರಿ. ಯಾವ ಕಾಲದ ಮಾತೋ. ಇಷ್ಟರಮೇಲೆ ಪ್ರಪಂಚದಲ್ಲಿರೋರೆಲ್ಲಾ ಒಬ್ಬರಿಗೊಬ್ಬರು ಸ್ನೇಹಿತರೇ. ಯಾವ ಜಾತಿ ಆದರೇನು ?"

"ಸದ್ಯ, ಭಾಷಣಮಾಡಿ ಬಿಟ್ಟಾದರೂ ಒಪ್ಪಿಕೊಂಡೆಯಲ್ಲಾ. ದಯಮಾಡಿಸಿ! ಏನೋ ಬಹಳ ಕೆಲಸ ಇದೆ ಅಂತಿದ್ರಲ್ಲಾ !"

"ದಯಮಾಡಿನೋದಿರಲಿ ಸ್ನೇಹಿತೆ ಅಂದಮೇಲೆ ಸ್ವಲ್ಪ ಕರೀದೇ ಇದ್ದರೆ ಆಗುತ್ತದೆಯೇ? ಅವಳಿಂದಾನೂ ಸ್ವಲ್ಪಉಪಕಾರ ಆಗಬೇಕಾಗಿದೆ."

"ಏನು ಬಂತಪ್ಪಾ ಗ್ರಹಚಾರ! ಕರೆದದ್ದೇ ಯಾಕೋ ದೊಡ್ಡ ತಪ್ಪಾಗ್ಹೋಯ್ತೆ?"

"ಮತ್ತೇ ಕಟ್‌ವರ್ಕ್ ಎಂಬ್ರಾಯ್ಡರೀ ಮಾಡೋಕೆ ಸಣ್ಣ ಕತ್ರಿ ಇದೆ ಏನೋ ತಗೋಬೇಕು. ಮನೇಲಿರೋದು ಆಗೋಲ್ಲಾ."

"ಎಷ್ಟಮ್ಮಾ ಆ ಕತ್ರೀಗೆ ? ಕ್ಯಾ ದಾಮ್ ?"

"ಸಾಡೇ ಏಕ್ ರುಪಯಾ ಮಾ" (ಒಂದೂವರೆ ರೂಪಾಯಿ)

"ಅಮ್ಮಾ.......ನನ್ನಾ ಆ ಆ ಆ"

"ಅಮ್ಮಾ ಮಗು ಮುದ್ದಾಗಿದೆ....ಏನಪ್ಪಾ ನಿನ್ಹೆಸರು ?"

"ಪ್ಪಿಚ್ಚಾದ್"

ಶಾರದಾ ಬೆಚ್ಚಿದಳು. ಕಂದಾರೀ ಕನ್ನಡ ಮಾತು. ಆಶ್ಚರ್ಯದಿಂದ "ಅವನ್ಹೆಸರೇ, ಭವಾನಿ ಪ್ರಸಾದ್ ಅಂತ. ಏನಮ್ಮಾ ನೀನಿಷ್ಟು ಚೆನ್ನಾಗಿ ಕನ್ನಡ ಮಾತನಾಡ್ತೀ. ನಿಮ್ಮ ಜನಕ್ಕೆ ನಾವು ಬೈದರೂ ತಿಳಿಯೋಲ್ಲ. ಇದರ ಮೇಲೆ ನಮ್ಮ ಮಾತು ಬಲು ಒರಟು. ನೀನು ಈ ಸೀಮೆಗೆ ಬಂದು ತುಂಬಾ ದಿವಸವಾಯಿತೇನೋ."

"ಇಲ್ಲಮ್ಮಾ ಎರಡೇ ದಿವಸ ಆಯಿತು. ಆದರೂ ನನಗೆ ಈ ಸೀಮೆ ಗೊತ್ತು."

"ಓ ಸರಿ. ಮತ್ತೇ ಸಣ್ಣ ಕತ್ರಿನೇ ಇಲ್ಲವಲ್ಲಾ. ನಾನು ಇದೆ

ಯೇನೋ ಅಂತ ಕರೆದೆ.”

“ತಂದು ಎಲ್ಲಾ ಖರ್ಚಾಯ್ತುವಮ್ಮಾ ಇನ್ನೊಂದಿನ ತರತೀನಿ” ಎನ್ನುತ್ತಾ ಕಂದಾರಿ ಹೊರಟು ಹೋದಳು.

ಕಂದಾರಿಯುವರು ಎಂದರೆ ಎಲ್ಲರಿಗೂ ಭಯ. ಶಾರದೆಗಂತೂ ಮೊದಲೇ ಅಳ್ಕೆದೆ. ಮೇಲಾಗಿ ಮಗುವನ್ನು ಬೇರೆ ದಿಟ್ಟಿಸಿ ನೋಡಿ ಮಾತ ನಾಡಿಸಿಬಿಟ್ಟಿದ್ದಾಳೆ. ಅದಕ್ಕಾಗಿ ಇನ್ನೂ ಹೆಚ್ಚು ಭಯ. ಮಗು ಅತ್ತಿತ್ತ ಹೋದರೆ ಇಪ್ಪತ್ತು ಸಲ ಕೂಗುವಳು. ಆಡಿಸುವ ಹುಡುಗಿಗೆ ಎಚ್ಚರಿಕೆ ಹೇಳಿದ್ದೂ ಹೇಳಿದ್ದೆ. ಹೀಗಾಗಿ ನಾನೇಕೆ ಕರೆದೇ ಅವಳನ್ನ? ಹಾಳು ಕತ್ರೀ ಇಲ್ಲದಿದ್ರೆ ಈಗೇನು ಉಳಿದುಹೋಗಿತ್ತು?ಎಂದು ಪೇಚಾಡುತ್ತಿದ್ದಳು ಶಾರದಾ.

ರಂಗರಾಯರ ಮನೆಯಲ್ಲಿ ಮಗುವಿನ ಹುಟ್ಟಿದ ಹಬ್ಬದ ಪ್ರಯುಕ್ತ ಸತ್ಯನಾರಾಯಣ ಪೂಜೆ ಬಹಳ ಸಂಭ್ರಮದಿಂದ ನಡೆಯುತ್ತಿದೆ. ಸಂಜೆ ದೇವರಿಗೆ ಮಂಗಳಾರತಿ, ಮಗುವಿಗೆ ಆರತಕ್ಷತೆ ಎಲ್ಲಾ ನಡೆಯಬೇಕಾಗಿದೆ. ಶಾರದಾ ಬಿಡುವಿಲ್ಲದೆ ಕೆಲಸಮಾಡುತ್ತಿದ್ದಾಳೆ. ಈ ಮಧ್ಯೆ “ಮಾ!”ಎಂದು ಯಾರೋ ಕೂಗಿದಂತಾಯಿತು. ನೋಡಿದರೆ, ಅವಳೇ ಕಂದಾರೀ! ಈ ಹುಟ್ಟಿದ ಹಬ್ಬದ ದಿನವೇ ಅವಳು ಬಂದುದೇಕೋ ಶಾರದೆಗೆ ಸರಿಹೊಂದ ಲಿಲ್ಲ. ಆದರೂ, “ಏನಮ್ಮಾ ಕತ್ರೀ ತಂದೆಯಾ? ವ್ಯಾಪಾರ ಮಾಡೋಕೆ ಇವತ್ತು ಕೈತೆರವಿಲ್ಲ. ಪೂಜೇ ಗಲಾಟೆಯಲ್ಲಿದ್ದೇನಮ್ಮಾ!.”

‘ಯಾವ ಪೂಜೆ ಮಾ.’

‘ಹೇಳಿದರೆ ನಿನಗೇನು ತಿಳಿಯುತ್ತಮ್ಮಾ. ನಮ್ಮಲ್ಲಿ ಈ ಹಬ್ಬಕ್ಕೆ ಸತ್ಯನಾರಾಯಣ ಪೂಜೆ ಅಂತೇವೆ. ದೊಡ್ಡ ಪೂಜೆಮ್ಮಾ.’

“ನನಗೂ ತಿಳಿಯುತ್ತಮ್ಮಾ.ನಾನೂ ದೇವರನ್ನು ನೋಡಲೇ?ಸ್ವಲ್ಪ ದೇವರ ಪ್ರಸಾದ ಕೊಡತೀಯಮ್ಮಾ? ನನಗೂ ನಿನಗೂ ಒಳ್ಳೇದು ಮಾಡ ಲಮ್ಮಾ ಸ್ವಾಮಿ!”

ಇವಳು ದೇವರ ವಿಷಯ ಮಾತನಾಡಿದ್ದು ಶಾರದೆಗೆ ಇನ್ನೂ ಆಶ್ಚರ್ಯ ವಾಯಿತು. “ಇದೇನೇ, ಕನ್ನಡ ಮಾತನಾಡ್ತೀಯಾ! ನಮ್ಮ ದೇವರೆಲ್ಲಾ ಗೊತ್ತು ಅಂತೀಯಾ! ಪ್ರಸಾದ ಬೇರೆ ಕೇಳ್ತೀಯಾ! ಏನೋಮ್ಮಾ ಬಲು ಆಶ್ಚರ್ಯ ಆಗುತ್ತೆ ನನಗೆ. ಇದೆಲ್ಲಾ ಎಲ್ಲಿ ನೋಡಿದ್ದೀಯಾ? ನಿನಗೆ ಹೇಗೆ

ಗೊತ್ತು ಹೇಳು."

ಕಂದಾರೀ ದೊಡ್ಡದೊಂದು ನಿಟ್ಟುಸಿರು ಬಿಟ್ಟು, "ಅಮ್ಮಾ ಅದೇ ಒಂದು ದೊಡ್ಡ ಕಥೆ. ಇನ್ನೊಂದಾದರೂ ಹೇಳುತ್ತೇನೆ." ಎಂದಳು.

"ಹಾಗಾದರೇ, ಇವಳೇ –ನಿನ್ನ ಹೆಸರು ಗೊತ್ತಿಲ್ಲಾ– ದೇವರನ್ನ ಪಡಸಾಲೇಲೇ ಕೂಡಿಸಿದೆ. ಆ ದೇವರಿಗೆ ಏನೂ ಭೇದವಿಲ್ಲ. ಬಂದು ನಿಂತುಕೊಂಡು ನೋಡಮ್ಮಾ ಯಾರು ಬೇಡಾಂತ ಅಂತಾರೆ. ಪ್ರಸಾದಾನೂ ಕೊಡ್ತೇನೆ. ನೀನು ಅಷ್ಟು ಭಕ್ತಿಯಿಂದ ಕೇಳಿದ್ದೆಷ್ಟೋ, ನಾ ಕೊಡೋ ದ್ದೆಷ್ಟೋ? ಬಾ, ಒಳಗೆ ಬಾ!''

ಶಾರದೆಯ ಮನಸ್ಸು ಹೊಯ್ದಾಡಹತ್ತಿತು. ಭಯದ ಸ್ಥಳದಲ್ಲಿ ವಿಸ್ಮಯವೂ ವಿಸ್ಮಯದ ಸ್ಥಾನದಲ್ಲಿ ದಯೆಯೂ ಉತ್ಪನ್ನವಾಗತೊಡಗಿತು. ಕಂದಾರಿಯು ಕೈಮುಗಿದು, ಕಣ್ಮುಚ್ಚಿ ಧ್ಯಾನಿಸುತ್ತಿರುವುದನ್ನ ಎವೆ ಇಕ್ಕದೆ ನೋಡಿದಳು. ಪರಿಶುದ್ಧ ಭಕ್ತಿರಸ ಉಕ್ಕಿಹರಿದು ಭಗವಂತನ ಪಾದಗಳಿಗೆ ಅಭಿಷೇಕ ಮಾಡುವಂತೆ ತೋರಿತು. ಕಂದಾರಿಗೆ ಸುತ್ತಲಿನ ಪರಿವೆಯೇ ಇಲ್ಲ. ತದೇಕಚಿತ್ತದಿಂದ ಧ್ಯಾನಮಾಡುತ್ತಾ ಭಾರವಾದ ಮನಸ್ಸನ್ನು ಹಗುರ ಮಾಡಲೆತ್ನಿಸಿದ್ದಾಳೆ. ಕಣ್ಣಿನಿಂದ ನೀರು ಧಾರೆಯಾಗಿ ಸುರಿಯು ತ್ತಿದೆ. 'ಪ್ರಸಾದ ಹಿಡಿ, ಕಂದಾರಮ್ಮಾ' ಎಂದು ಶಾರದಾ ಕೂಗಿದಾಗಲೇ ಅವಳು ಕಣ್ಣುತೆರೆದದ್ದು. ಪ್ರಸಾದವನ್ನು ಎರಡು ಕೈಲೂ ತೆಗೆದುಕೊಂಡು ಕಣ್ಣೊತ್ತಿಕೊಂಡಳು. ತನ್ನ ಚೀಲದಲ್ಲಿ ಅದನ್ನು ಹಾಕಿಕೊಂಡು 'ಅಮ್ಮಾ, ವ್ಯಾಪಾರ ನಾಳೆ ಮಾಡಿ. ಕತ್ರೀ ಇಟ್ಟುಬಿಟ್ಟು ಹೋಗ್ತೇನೆ. ನಾಳೆ ಬರ್ತೇನೆ' ಎಂದು ಕೈಮುಗಿದು ಹೊರಟು ಹೋದಳು. ಎಷ್ಟೋ ಹೊತ್ತು ಶಾರದಾ ಅವಳು ಹೋದ ದಾರಿಯನ್ನೇ ನೋಡುತ್ತಾ ಮಾಡಬೇಕಾದ ಕೆಲಸವನ್ನು ಮರೆತು ನಿಂತುಬಿಟ್ಟಳು. ಆರತಕ್ಷತೆ ಮುತ್ತೈದೆಯರು ಬರಹತ್ತಿದಾಗಲೇ ಅವಳಿಗೆ ಮತ್ತೆ ಕೆಲಸಗಳ ಯೋಚನೆ. ಅಂದಿನ ಆರತಿ, ಮಂಗಳಾರತಿ ಎಲ್ಲಾ ನಾಗಿದವು ಶಾರದೆಯ ಮನಸ್ಸು ಮಾತ್ರ ಎಲ್ಲೋ ಇತ್ತು. ಅವಳ ಕಥೆಯನ್ನು ಕೇಳಲು ಮರುದಿನವನ್ನು ಆತುರದಿಂದ ಬಯಸುತ್ತಿತ್ತು.

○ ○ ○ ○ ○

ನವರಾತ್ರಿಯು ಭರದಿಂದ ಸಾಗಿದೆ. ಶಕ್ತಿದೇವತಾ ಪೂಜೆ, ಮನೇ

ದೇವರ ಪೂಜೆ ಮತ್ತು ಗೊಂಬೆ ಪೂಜೆ. ಹೀಗೆ ನಾನಾ ರೀತಿಯಲ್ಲಿ ಜನರು ಆನಂದಿಸುವ ನವರಾತ್ರಿಯ ಮೊದಲು ದಿನ-ಪಾಡ್ಯ. ರಾಮಶಾಸ್ತ್ರಿಗಳ ಮನೆಯಲ್ಲಿ ಸತ್ಯನಾರಾಯಣ ವ್ರತ ಮಾಡುವ ಪ್ರಯತ್ನಗಳಾಗುತ್ತಿವೆ. ಹಿಂದಿನ ರಾತ್ರಿಯಿಂದಲೂ ಬೊಂಬೆ ಇಡುವುದೂ ಬೆಳಿಗ್ಗೆ ಪೂಜೆಗೆ ಅಣಿ ಮಾಡುವುದೂ ಹೀಗೆ. ಮನೆ ಮಕ್ಕಳೂ ಸೊಸೆಯರೂ ಎಲ್ಲಾ ತುಂಬಾ ಕೆಲಸದಲ್ಲಿದ್ದಾರೆ. ಮನೆ ಯಜಮಾನಿ ವೆಂಕಮ್ಮನೋರು ರಜಸ್ವಲೆಯಾಗಿದ್ದ ವಿಧವೆ ಹಿರೀ ಸೊಸೆಯನ್ನು ಕುರಿತು 'ಲೇ ಭಾಗೀ (ಭಾಗಿರಥಿ) ಬೆಳಿಗ್ಗೆ ಮನೆಯೋರಿಗೆಲ್ಲಾ ಬೇಕಾದಷ್ಟು ಕೆಲಸ. ಎರೆಯೋದೋ, ಅಡಿಗೇನೋ. ಬ್ರಾಹ್ಮಣಾ ಮುತ್ತೈದೇರಿಗೆ ಊಟಕ್ಕೆ ಹೇಳಿದೆ. ನಿಂಗೆ ಯಾರು ನೀರ್ಹಾಕೋರು ?"

'ಹಾಗಾದ್ರೇನ್ಮಾಡ್ಲೀ ಅತ್ತೆಮ್ಮಾ'

'ಏನ್ಮಾಡ್ಲೀ ಅಂತ ಕೇಳ್ತೀಯಾ? ಊರಲ್ಲಿ ಕೆರೆ ಬತ್ತಿ ಹೋಯಿತೆ? ಹೊತ್ತು ಹುಟ್ಟೋಕ್ಮುಂಚೆ ಹೋಗಿ ಮುಳುಗಿ ಬಾ. ಮನೆ ಸಾರಿಸಿ ಗುಡಿಸಿ ಆಗಬೇಕು, ಅಷ್ಟು ಹೊತ್ತಿಗೆ. ಸದ್ಯ ಮೈಲಿಗೆ ಹೋಗಲಿ. ಏನೇ ?' ಎಂದು ಗುಡುಗಿದರು.

ಪಾಪ! ಭಾಗೀರಥಿ ಮೆಲ್ಲನೆ 'ಹೊಂ' ಎಂದಳು. ಮೈಯಲ್ಲಿ ಸ್ವಸ್ಥ ವಿರಲಿಲ್ಲ. ತಣ್ಣೀರು ಮುಳುಗಿದರೆ ಮೈಗಾಗುತ್ತಿದೆಯೇ? ಕೇಳುವವರಾರು? ಅವಳ ಗಂಡ ಇದ್ದಾನೆಯೇ? ಇದರ ಮೇಲೆ ಇನ್ನೂ ಚೆನ್ನಾಗಿ ಬೆಳಗಾಗುವ ದಕ್ಕೆ ಮುಂಚೆ ಕೆರೆಯ ಬಳಿ ಜನರೋಡಾಟವಿಲ್ಲ. ಒಬ್ಬೊಬ್ಬರು ಸುಳಿದಾ ಡುತ್ತಾರೆ. ಕೆಟ್ಟ ಜನರ ಕಣ್ಣಿಗೆ ಬಿದ್ದರೆ ಮಾನ ಉಳಿಯುವ ಬಗೆ ಹೇಗೆ ? ತುಂಬು ಪ್ರಾಯದ ಸುಂದರಿ ಭಾಗೀರಥಿ. ಅವಳ ದುರದೃಷ್ಟಕ್ಕೆ ಏನು ಮಾಡಿಯಾಳು? ಈ ಅನಾಥ ವಿಧವೆಯ ಗೋಳನ್ನು ಕೇಳುವರಾರು ?

ಇನ್ನೂ ಐದು ಘಂಟೆ ಮುಂಚೆಯೇ ಅತ್ತೆ ಕೂಗಲಾರಂಭಿಸಿದರು. ಹೊರಗೆ ಸಣ್ಣ ಸೋನೇ ಮಳೆ. ಭಾಗೀರಥಿ ವಿಧಿ ಇಲ್ಲದೆ, ಬಟ್ಟೆ ಎಲ್ಲಾ ಕಟ್ಟಿಕೊಂಡು ಹೊರಡಲನುವಾದಳು. ತುಂಬಾ ಕತ್ತಲು. ಬೆದರಿದಳು. ಹೆದರಿದ ಧ್ವನಿಯಿಂದ 'ಅತ್ತೆಮ್ಮಾ! ತುಂಬಾ ಕತ್ಲು. ಕೆರೇ ಹತ್ರ ಯಾರೂ ಜನ ಇರೋಲ್ಲಾ ಸ್ವಲ್ಪ ಸುಬ್ಬುನಾದರೂ............ (ಅವಳ ಮೈದುನಾ)'

' ಮಳೇಲಿ ಸುಬ್ಬು ಬೇರೆ ಬರ್ತಾನೆ ಕಣೆ. ನಿನ್ನ ಚೆಂದ ಅಷ್ಟರಲ್ಲೇ ಇದೆ ಹೋಗು ! ನಿನ್ನೇನೂ ಮುಟ್ಟಗೋಳಲ್ಲ. ಅವನು ಬರಗಿರೋಲ್ಲಾ ಅವನಿಗೆ ಎಣ್ಣೆ ನೀರ್ಹಾಕ್ಬೇಕು. ಹೋಗೇ ಹೊತ್ತಾಯ್ತು '

ಭಾಗೀರಥಿ ತನ್ನ ಹಣೇ ಬರಹವನ್ನು ನೆನೆದು ಕಣ್ಣೀರಿಡುತ್ತಾ ಹೋದಳು. ಭಾಗೀರಥಿ ಕೆರೆಯಲ್ಲಿ ಬಟ್ಟೆಯೊಗೆಯುತ್ತಿರುವಾಗಲೇ ಯಾರೋ ಸಿಳ್ಳುಹಾಕುತ್ತಿರುವುದು ಕೇಳಿತು. ತರಳೆಯು ತಲ್ಲಣಿಸಿದಳು. ದಿಕ್ಕೆಟ್ಟು ಸುತ್ತಲೂ ನೋಡಿದಳು. ದೂರದಲ್ಲಿ ಯಾರೋ ತನ್ನ ಕಡೆಯೇ ಬೇಗ ಬೇಗ ಬರುತ್ತಿದ್ದರು. ಆ ಸುತ್ತಲೂ ಬೇರೆ ಜನರಿಲ್ಲ ನೋಡುತ್ತಿದ್ದಂತೆಯೇ ವ್ಯಕ್ತಿ ತೀರಾ ಸಮೀಪಿಸಿತು. ಎತ್ತರವಾದ, ನಡುವಯಸ್ಸಿನ ಆಳು. ನೋಡಿದರೆ ಎದೆ ನಡುಕ ಬರುವ ರೂಪ, ಉಡುಪು. ಇವಳಾದರೋ ನಡುಗಿ ನೀರಾಗಿ ಬಟ್ಟೆಗಳನ್ನು ಅಲ್ಲೇ ಬಿಸುಟು, ನೀರಿನಲ್ಲಿ ಹಾರಿಯೇ ಬಿಟ್ಟಳು. ಮೆಟ್ಟಲುಗಳ ಮೇಲೆ ನಿಂತು ದಿಟ್ಟಿಸುತ್ತಿದ್ದ ವ್ಯಕ್ತಿ ಕೆಲವಾರು ನಿಮಿಷಗಳಾದರೂ ಅವಳು ಮೇಲೆ ಬಾರದ್ದನ್ನು ಕಂಡು ಸರ್ರನೆ ತಾನೂ ನೀರಿಗೆ ಹಾರಿ ಅವಳನ್ನು ಎಳೆತಂದಿತು. ಕಣ್ಣು ತೆರೆದಾಗ ಭಾಗೀರಥಿ ಕಂದಾರಿಯವರ ಗುಂಪಿನಲ್ಲಿದ್ದಳು. ಆ ಭಾಗೀರಥಿಯೇ ಇಂದು ನಿಮ್ಮ ಮನೆಗೆ ಬಂದಿರುವ ಕಂದಾರಿ "ನಜೀರಾ". ಅಮ್ಮಾ! ನೀನು ಬಹಳ ಪ್ರೀತಿಯಿಂದ ಕೇಳಿದೆಯಾದ್ದರಿಂದ ಎಲ್ಲವನ್ನೂ ಹೇಳಿದೆ. ಯಾರ ಮುಂದೂ ಹೇಳಬೇಡವಮ್ಮಾ; ಅಷ್ಟೇ ನಾನು ಬೇಡುವುದು.'

ನೆಟ್ಟಕಣ್ಣು, ಬಿಟ್ಟಬಾಯಿ ಮಾಡಿಕೊಂಡು, ಅವಳ ಕಥೆಯನ್ನು ಕೇಳುತ್ತಿದ್ದ ಶಾರದಾ, ಕಣ್ಣೀರಿಡುತ್ತಾ "ಭಾಗೂ, ಭಾಗೂ! ಅಯ್ಯೋ ನಮ್ಮಮ್ಮಾ ನಿನ್ನ ಗತಿ ಹೀಗಾಯಿತೇ ? ನೀನು ಎಲ್ಲೋ ಓಡಿಹೋದೆ ಎಂದು ನಮ್ಮೂರಲ್ಲಿ ಹೇಳುತ್ತಾ ಇದ್ದರು. ಆದರೆ ಎಲ್ಲಿ ? ಏನು ? ಎಂದೂ ಯಾರಿಗೂ ಗೊತ್ತಿರಲಿಲ್ಲ. ನಾನಿನ್ನೂ ತುಂಬಾ ಚಿಕ್ಕವಳಂತೆ. ನೀನು ನನ್ನನ್ನು ಎತ್ತಿ ಆಡಿಸುತ್ತಿದ್ದೆಯಂತೆ. ನಾನು ಶಂಕರೀಬಾಯಿಯ ಕೊನೇ ಮಗಳು ರತ್ನ."

"ರತ್ನಾನೇ! ಹೌದು. ನೀನಿನ್ನೂ ಚಿಕ್ಕವಳು. ನಿಮ್ಮ ತಾಯಿ ತುಂಬಾ ಒಳ್ಳೆಯೋರು. ರತ್ನಾ! ಕೇಳು. ಈ ಹಾಳು ಹೆಣ್ಣು ಜನ್ಮ ಬೇಡ. ಬೇಡಮ್ಮಾ ಬೇಡಾ. ಬ್ರಾಹ್ಮಣ ಜನ್ಮ ಬೇಡ ರತ್ನಾ ! ನಿನ್ನಷ್ಟು ವಿವೇಕ,

ಪ್ರೀತಿ ಅವರಿಗೆ ಬರಲಿಲ್ಲಾ ನೋಡು. ನಿನ್ನೆ ಅದೇ ಪೂಜೆ ನಿಮ್ಮನೇಲಿ ನಡೆದದ್ದರಿಂದ ಹಿಂದಿನದೆಲ್ಲಾ ನೆನಪಾಗಿ ಬಲು ದುಃಖ ಬಂತು. ಆದರೆ ನಿನ್ನನ್ನು ನೋಡಿದ್ದು ಆಪ್ತೇಷ್ಟರನ್ನೆಲ್ಲಾ ನೋಡಿದ್ದಕ್ಕಿಂತ ಹೆಚ್ಚು ಸಂತೋಷವಾಯಿತು. ಪ್ರಸಾದ್, ಇಗೋ ಇದು ನನ್ನ ಬಹುಮಾನ. ಮರಿ ಸುಖವಾಗಿ ಬಾಳು" ಎಂದು ಮಗುವಿನ ಕೊರಳಿಗೆ ಹವಳದ ಸರ ಒಂದನ್ನು ಹಾಕಿ, "ರತ್ನಾ! ಇನ್ನು ನಾನಿಲ್ಲಿ ಹೆಚ್ಚುಹೊತ್ತು ನಿಲ್ಲಬಾರದು. ಹೋಗಿ ಬರಲೇ?" ಎಂದು ಹೊರಡಲನುವಾದಳು.

ಶಾರದೆಗೆ ದುಃಖ ತಡೆಯಲಾಗಲಿಲ್ಲ. ಅವಳೂ ಕಣ್ಣೀರಿಡುತ್ತಾ "ಭಾಗೂ, ನೀನಿನ್ನಾದರೂ ಇಲ್ಲೇ ಇರಬಾರದೇ? ಪ್ರಸಾದನ್ನ ಆಡಿಸಿ ಕೊಂಡಿದ್ದು ಬಿಡು. ನಿನಗೇನೂ ತೊಂದರೆ ಮಾಡುವುದಿಲ್ಲ. ನಮ್ಮಕ್ಕನಂತೆ ಇದ್ದು ಬಿಡು" ಎಂದಳು.

"ಅಯ್ಯೋ ಹುಚ್ಚಿ! ನನಗೇನು ಕಡಿಮೆ ಇಲ್ಲಿರುವುದಕ್ಕೆ? ಅಲ್ಲಿ ಸುಖ ವಾಗಿದ್ದೇನೆ. ಏನೋ ಪುಣ್ಯವಿತ್ತು. ನಮ್ಮ ಜನ, ದೇವರು, ಎಲ್ಲಾ ಕಂಡೆ. ಸಾಕು. ಇನ್ನೇನಾಗಬೇಕು? ಆದರೂ ರತ್ನಾ! ಈ ದೇಶ, ಜನ ನನಗೆ ಬೇಕಿಲ್ಲ. ನನ್ನ ಹಿತವಂತರು ಅಗೋ ಅಲ್ಲಿದ್ದಾರೆ. ನಾವು ಮುಂದಿನ ವಾರ ಈ ಊರು ಬಿಟ್ಟು ಹೊರಡುತ್ತೇವೆ. ಮತ್ತೆ ನಿನ್ನ ನೋಡಲಾಗುತ್ತದೆಯೋ ಇಲ್ಲವೋ ಕಾಣೆ. ನೆನಪಿರಲಿ ತಂಗೀ ರತ್ನಾ! ಪ್ರಸಾದ್ ನಾ ಬರ್ತೀನಪ್ಪಾ!" ಎಂದು ಮಗುವಿನ ಗಲ್ಲ ಸವರಿ, ಸಂತೋಷದ ನೋಟ ಒಂದನ್ನು ರತ್ನಳ ಕಡೆ ಬೀರಿ ನಜೀರಾ ಬಿರಬಿರನೆ ಹೋದಳು.

ಶಾರದಾ ಮತ್ತು ಪ್ರಸಾದ್ ಅವಳು ಹೋದ ಹಾದಿಯನ್ನೇ ನೋಡುತ್ತಾ ನಿಂತರು.

# ಒಲವೋ ಕುಲವೋ

ಶಾಲೆಯಿಂದ ಓಡೋಡಿ ಮನೆಗೆ ಬಂದೆ. ಆಗಲೇ ಮನೆಗೆ ಬಂದಿದ್ದ ತಂದೆಯವರು ನನ್ನ ನಿರೀಕ್ಷಣೆಯಲ್ಲೇ ಇದ್ದರು. ನನ್ನನ್ನು ಕಾಣುತ್ತಲೇ ಅವರಿಗೆ ಆಶ್ಚರ್ಯವಾಯಿತು. ಏಕೆಂದರೆ, ಈ ದಿವಸ ನಾನೊಬ್ಬಳೇ ಬರದೆ ಜೊತೆಗೊಂದು ಪುಟ್ಟ ಹುಡುಗಿಯನ್ನೂ ಕರೆತಂದುಬಿಟ್ಟಿದ್ದೆ. ಅವರು, ಏನನ್ನೋ ಓದುತ್ತಿದ್ದವರು ಹಾಗೆಯೇ ಕನ್ನಡಕವನ್ನು ತೆಗೆದು ಕೈಯಲ್ಲಿ ಹಿಡಿದುಕೊಂಡು, ಆ ಹುಡುಗಿಯನ್ನು ಎರಡು ನಿಮಿಷ ದಿಟ್ಟಿಸಿ ಏನನ್ನೋ ಕೇಳಬೇಕೆಂದಿದ್ದರು. ಅಷ್ಟರಲ್ಲಿ ನಾನೇ "ಅಣ್ಣಾ ! ಈ ಹುಡುಗಿ ಚೆನ್ನಾಗಿಲ್ಲೇ ನಣ್ಣಾ ? ಇವತ್ತು ಶುಕ್ರವಾರ ನಮ್ಮ ಸ್ಕೂಲಿನಲ್ಲಿ ಸರಸ್ವತೀಪೂಜೆ ಆಯಿ ತಲ್ಲಾ ? ಆಗ ಇವಳು ಬಾಗಿಲಲ್ಲೇ ಕೂತಿದ್ಲು. ನಾನು ಮನೆಗೆ ಬರುವಾಗ ಅವಳಿಗೆ ಸ್ವಲ್ಪ ಕಡ್ಲೇಪುರಿ ಕೊಟ್ಟರೆ ನನ್ನ ಹಿಂದೆ ಬಂದುಬಿಟ್ಲು. 'ಹೋಗೇ ನಿಮ್ಮನೇಗೇ' ಅಂದರೂ ಹೋಗಲಿಲ್ಲ ನೋಡಣ್ಣಾ!'' ಎಂದೆ. ಅವರಿಗೆ ಇದೊಂದೂ ಅರ್ಥವಾದಂತೆ ತೋರಲಿಲ್ಲ. ಅವರು "ಕತ್ತಲೆ ಒಂದು ಕಡೆ; ಇನ್ನೂ ಚಿಕ್ಕ ಮಗು; ಇದನ್ಯಾತಕ್ಕೆ ಕರತಂದೆಯಮ್ಮಾ ? ಅದ್ಯಾರ ಮಗುವಂತೆ ? ಏನು ಕತೆ ? ಆದರ ತಂದೆತಾಯಿ ಎಷ್ಟು ಹುಡು ಕುತ್ತಾ ಇದ್ದಾರೆಯೋ ಏನೋ ? ಕಳಿಸಿಕೊಟ್ಟಾದರೂ ಬರುತ್ತೇನೆ. ಅಯ್ಯೋ ಪಾಪ !'' ಎಂದರು.

"ಆದಕ್ಕೆ ಸರಿಯಾಗಿ ಮಾತನಾಡೋಕೆ ಬರೋಲ್ಲಣ್ಣಾ! ಏನೇನೋ ಹೇಳುತ್ತೆ. ನೀನೇ ಕೇಳು ಬೇಕಾದರೆ.''

ಹುಡುಗಿಗೆ ನಾಲ್ಕು ವರ್ಷಕ್ಕಿಂತ ಹೆಚ್ಚಿದಂತೆ ತೋರುತ್ತಿರಲಿಲ್ಲ. ಮೈಮೇಲೆ ಕರಿಯ ಬಣ್ಣದ ಚಕ್ಕಿನ ಹರುಕು ಲಂಗ ಹೊರತು ಬೇರೆ ಬಟ್ಟೆ ಯಾಗಲಿ ಒಡವೆಗಳಾಗಲೀ ಇರಲಿಲ್ಲ. ಆಗಲೇ ಕಿವಿಮೂಗುಗಳನ್ನು ಚುಚ್ಚಿ ಕಡ್ಡಿ ಚೂರುಗಳನ್ನು ಸಿಕ್ಕಿಸಿದ್ದರು. ಅವಳ ಮೈ, ಮುಖ ಕಂಗೆಟ್ಟಿದ್ದರೂ ಕಣ್ಣುಗಳು ವಿಶಾಲವಾಗಿಯೂ ಹೊಳಪಾಗಿಯೂ ಇದ್ದು, ಒಮ್ಮೆ ನನ್ನ ಕಡೆಗೂ ಮತ್ತೊಮ್ಮೆ ತಂದೆಯವರ ಕಡೆಗೂ ಹೊರಳುತ್ತಿದ್ದವು. ಒಟ್ಟಿ

ನಲ್ಲಿ ಮಗು ಉತ್ತಮ ಜಾತಿಗೆ ಸೇರಿದುದೆಂದು ಹೇಳುವಂತಿರಲಿಲ್ಲ. ತಂದೆಯವರು ಅವಳ ಹತ್ತಿರ ಸರಿಯುತ್ತಲೇ ಅವಳು ಹೆದರಿ ಹಿಂದಕ್ಕೆ ಸರಿದು ನನ್ನ ಕಡೆಗೆ ನೋಡಹತ್ತಿದಳು. ಆಗ ಅವರು ಒಂದೆರಡು ಬಿಸ್ಕತ್ತನ್ನು ಅವಳ ಕೈಗೆ ಕೊಟ್ಟು ಉಪಾಯದಿಂದ ಕೇಳಿದರು: " ರೊಟ್ಟಿ ಚೆಂದಾಗದೇನವ್ವಾ? ಇನ್ನೊಸಿ ಕೊಡ್ಲ್ಯಾ?ಅದ ತಿನ್ನು. ನಿನ್ನ ಹೆಸರೇನು ಹೇಳು ಮತ್ತೆ."

ಬಿಸ್ಕತ್ತಿನ ಚೂರು ಬಾಯಲ್ಲಿದ್ದಂತೆಯೇ ಅವಳು ಅಸ್ಪಷ್ಟವಾಗಿ 'ಮುನೀ' ಎಂದಳು.

" ಮುನೀ! ಮುನಿಯಮ್ಮ ಜಾಣೆ. ನಿಮ್ಮ ಹಟ್ಟಿ ಎಲ್ಲಿದೆ? ನಿಮ್ಮವ್ವ ಅಪ್ಪಾ ಎಲ್ಲಿ ಹೇಳೊಲ್ಲಿಯಾ?"

ಮಗು, ಏನನ್ನು ಕೇಳಿದರೂ 'ಅಲ್ಲದೆ, 'ಅಲ್ಲದೆ,' ಅನ್ನುತ್ತಿತ್ತು. ಇನ್ನೂ ಏನಾದರೂ ಕೇಳಹೋದರೆ ಬೆಪ್ಪಾಗಿ ಗಾಬರಿಯಾಗುತ್ತಿತ್ತು. ತಂದೆಯವರು ನಿರುಪಾಯರಾಗಿ ಬೆಳಿಗ್ಗೆ ವಿಚಾರಿಸುವುದೆಂದು ಸುಮ್ಮಗಾದರು. ಆ ರಾತ್ರಿ ಮುನಿ ನಮ್ಮಲ್ಲಿಯೇ ಊಟ ಮಾಡಿ ಬಾಗಿಲ ಹತ್ತಿರ ಒಂದು ಚಾಪೆಯ ಮೇಲೆ ಮಲಗಿಬಿಟ್ಟಳು.

ಬೆಳಗಾಗುತ್ತಲೇ ತಂದೆಯವರು ಎಲ್ಲೆಲ್ಲಿಯೋ ವಿಚಾರಿಸಿದರು. ಪೋಲೀಸಿಗೂ ತಿಳಿಸಿದರು. ವಾರಸ್ದಾರರದೂ ಪತ್ತೆ ಸಿಗಲಿಲ್ಲ. ಕೊನೆಗೆ, ಮಗು ಹೊಲಗೇರಿಗೆ ಸೇರಿದ್ದೆಂದು ಯಾರಿಂದಲೋ ತಿಳಿದುಬಂತು. ಅಲ್ಲಿ ವಿಚಾರಿಸುವಾಗ " ನಮ್ಮದ್ದಲ್ಲಾ. ಮಾದಿಗ್ಗೇರಿಯಲ್ಲಿ ಕೇಳಿ " ಎಂದರು. ಅಲ್ಲಿಯೂ ಹೋಗಿ ಕೇಳಿದರೆ " ಹೊಲಗೇರಿಯವಳು ಒಬ್ಬಳು ಒಂದು ಮಗು ಬಿಟ್ಟು ಬಾವಿಗೆ ಹಾರಿಕೊಂಡಳು"ಎಂದು ಕೇಳಿದೆವು. ಆದರೆ "ನಾವೆಲ್ಲಿಯೂ ಈ ಮಗು ನೋಡಿದಂತಿಲ್ಲ. ನಮಗೆ ತಿಳೀದು" ಎಂದು ಬಿಟ್ಟರು. ಈಗ, ಅವಳನ್ನು ಮನೆಯಲ್ಲಿಟ್ಟುಕೊಳ್ಳುವುದಕ್ಕಿಲ್ಲ. ಸಮಾಜವು ಹೊರದೂಡಿರುವ ಅನಾಥ ಮಗುವನ್ನು ನಾವೂ ನೂಕಿ ಬಿಡಲು ಮನಸ್ಸೊಪ್ಪದು. ಹೀಗಾಗಿ ತಂದೆಯವರಿಗೆ ಉಭಯಸಂಕಟಕ್ಕಿಟ್ಟಿತು. ಈ ವಿಚಾರವನ್ನು ಅವರು ಯೋಚಿಸುತ್ತಾ ಇರುವಾಗಲೇ, ಮುನಿಯೊಡನೆ ಮಾತನಾಡುತ್ತಿದ್ದ ನಾನು ಬಳಿಗೆ ಹೋಗಿ " ಅಣ್ಣಾ, ಮುನೀ ನಮ್ಮನೇಲೇ ಇರಲಣ್ಣಾ. ನನ್ನ ಜೊತೇಗೆ. ಎಲ್ಲೂ ಕಳಿಸಬೇಡಣ್ಣಾ! " ಎಂದೆ.

" ಹಾಗೆಂದರೇನು ಮಗೂ? ಅದು ಯಾರ ಮಗುವ್ವೋ ಏನೋ! ನಾವಿಟ್ಟುಕೊಂಡರೆ ಹೇಗಮ್ಮಾ? "

" ಮತ್ತೆ, ಎಲ್ಲಾರು "ನಮ್ಮದಲ್ಲಾ ನಮ್ಮದಲ್ಲಾ" ಅಂತಾರೆ ಎಂದಿಯಲ್ಲಾ? ಮುನಿ ನಮ್ಮವಳೇ ಎಂದು ಇಲ್ಲೇ ಇಟ್ಟುಕೊಳ್ಳೋಣ ಅಣ್ಣಾ! ತೋಟದಲ್ಲಿ ನನ್ನ ಜೊತೆಗೆ ಅವಳೂ ಹೂ ಕೊಯ್ತುಳು; ಆ ಮುನೀನ್ನಾ ಇನ್ನು ಮೇಲೆ 'ಮಣೀ' ಅಂತಾ ಕರೀತೇನಣ್ಣಾ! ಏನಣ್ಣಾ!!"

ನನ್ನ ಮಾತುಗಳನ್ನೆಲ್ಲಾ ಕೇಳಿ, ಅವರಿಗೆ ನಗು ಬಂತು. " ಹೋಗಮ್ಮಾ, ನಿನ್ನ ಮಣೀ ಜೊತೆ ಆಡಿಕೋ " ಎಂದರು.

ನನ್ನ ಸಂತೋಷವೇ ಸಂತೋಷ. ಅವಳೊಡನೆ ಆಡಲು ಓಡಿದೆ.

ಮಣಿ ನಮ್ಮಲ್ಲಿಗೆ ಬಂದು ಒಂದೆರಡು ವರ್ಷಗಳಾದುವು. ಬಂದ ಹೊಸದರಲ್ಲಿ ಜನರೆಲ್ಲಾ "ಗುಸುಗುಸೂ, ಪಿಸು ಪಿಸೂ," ಎಂದು ನಮ್ಮನ್ನು ಆಡಿಕೊಂಡರು. ನಮ್ಮ ಮನೆಗೆ ಬರಲೂ ಹಿಂತೆಗೆದರು. ಈಗ ಎಲ್ಲವೂ ಸರಿ ಹೋಯಿತು. ಈಗ ನಮ್ಮ ಮಣಿ ಬಲು ಜಾಣೆ. ಕನ್ನಡ ಚೆನ್ನಾಗಿ ಓದುತ್ತಾಳೆ. ಸಣ್ಣ ಪುಟ್ಟ ಕೆಲಸಗಳನ್ನು ಅಚ್ಚುಕಟ್ಟಾಗಿ ಮಾಡುತ್ತಾಳೆ. ನಮ್ಮಂತೆಯೇ ಸ್ಪಷ್ಟವಾಗಿ ಮಾತನಾಡುವುದೇ ಅಲ್ಲದೆ, ಶುಚಿಯಾಗಿರುತ್ತಾಳೆ. ನನ್ನನ್ನು ಬಿಟ್ಟು ಊಟ ತಿಂಡಿ ಮಾಡುವುದಿಲ್ಲ. ಯಾವಾಗಲೂ 'ಅಕ್ಕಾ ಅಕ್ಕಾ' ಎಂದು ನನ್ನ ಹಿಂದೆ ಹಿಂದೆ ಸುತ್ತುತ್ತಿರುತ್ತಾಳೆ.

ಒಂದು ದಿವಸ ನಾವಿಬ್ಬರೂ ಆಡುತ್ತಿದ್ದಾಗ ತಂದೆಯವರು ನಿಂತು ನೋಡುತ್ತಾ ಇದ್ದರು. ಅವರಿಗೆ ಸಂತೋಷ ಉಕ್ಕಿಬಂದು ನಮ್ಮನ್ನು " ಕಮಲೂ! ಮಣಿ!! ಎಂದು ಕೂಗಿದರು. ಕೂಡಲೇ ನಾವಿಬ್ಬರೂ ಹತ್ತಿರ ಹೋಗಿ " ಏನಣ್ಣಾ! " ಎಂದೆವು. "ಅವರು ಏನೂ ಇಲ್ಲಮ್ಮಾ! ನಿಮಗೆ ಆಟದಲ್ಲಿ ಕತ್ತಲಾದದ್ದೂ ಕೂಡ ತಿಳಿಯೋದಿಲ್ಲವಲ್ಲಾ! ಒಳ್ಳೇ ಜೊತೆ ಸೇರಿದಿರಿ. ಇನ್ನೂ ಆಡುವ ವಯಸ್ಸು. ಈಗಾಗಲೇ ಲಗ್ನಕ್ಕೇನವಸರ ಎಂದಿದ್ದರೂ, ನಿಮ್ಮಮ್ಮ "ಅವಳ ಕೈಗೆ ಧಾರೇ ನೀರು ಬಿದ್ದದ್ದು ನೋಡಿ ನಾನು ಪ್ರಾಣ ಬಿಡುತ್ತೇನೆ. " ಎಂದು ಹಂಬಲಿಸಿದರು. ಅವಳ ಕೊನೆಯಾಸೆಯನ್ನು ತೀರಿಸುವುದಕ್ಕೋಸ್ಕರ, ಇಷ್ಟು ಬೇಗ ನಿನ್ನನ್ನು ಕಂಡವರ ಕೈಲಿಟ್ಟದ್ದಾಯಿತು. ಇನ್ನು ಮುಂದೆ ನಾನೊಬ್ಬನೇ ಇರಬೇಕಾಯಿತೇ ಎಂದು

ಚಿಂತಿಸುತ್ತಿದ್ದೆ. ಅದಕ್ಕೆ ಸರಿಯಾಗಿ ನಮ್ಮ ಮಣಿ ಬಂದು ಸೇರಿದಳು. ಅವಳನ್ನು ಸಾಕಿದ್ದು ಸಾರ್ಥಕವಾಯಿತು. ದೇವರು ಅವಳನ್ನು ಚೆನ್ನಾಗಿಡಲಿ" ಎಂದು ನಮ್ಮಿಬ್ಬರನ್ನೂ ಮನೆಯೊಳಗೆ ಕರೆದುಕೊಂಡು ಹೊರಟು ಹೋದರು.

ಮಣಿಯೊಡನೆ ಬೇಸರವಿಲ್ಲದಂತೆ ಬೇಸಿಗೆಗಳನ್ನು ಕಳೆದೆವು. ಈ ಸಲವೂ ರಜ ಬಂದು ಎರಡು ದಿವಸಗಳಾಗಿದ್ದವು. ಈಗ ತಾನೇ ಬಿಸಿಲಿನ ಝಳ ಕಡಿಮೆಯಾಗಿ ಸಂಜೆಯ ತಂಗಾಳಿ ಬೀಸುತ್ತಿತ್ತು. ನಾನೂ ಮಣಿಯೂ ನಮ್ಮ ತಂದೆಯವರೊಡನೆ ನಮ್ಮ ಕೈತೋಟದ ನಡುವೆ ಹುಲ್ಲು ಹಾಸಿನ ಮೇಲೆ ಕುಳಿತು ಏನೇನನ್ನೋ ಹೇಳಿಕೊಂಡು ನಗುತ್ತಾ ಇದ್ದೆವು. ಆಗ ಆಫೀಸ್ ಜವಾನ ಒಂದು ಕಾಗದ ತಂದು ತಂದೆಯವರಿಗೆ ಕೊಟ್ಟು ಹೊರಟುಹೋದ. ಪತ್ರವನ್ನೋದುತ್ತಾ ಅವರು ದೊಡ್ಡದಾಗಿ ನಿಟ್ಟುಸಿರಿಟ್ಟರು. ಕಣ್ಣುಗಳು ಹನಿಗೂಡಿದವು. ಕೂಡಲೇ ಮಣಿ " ಅಣ್ಣಾ ! ಏನು ಸಮಾಚಾರ ? ಏಕೆ ಹೇಳಿ " ಎಂದಳು. ಅವರು "ಮಣೀ ! ಇನ್ನು ಮುಂದೆ ನಾವು ಮೂವರೂ ಹೀಗೆ ಒಟ್ಟಾಗಿ ಕೂತು ಕಾಲಕಳೆಯುವುದು ಅಪರೂಪವಮ್ಮ ನಾಳೆ ಬುಧವಾರ ನಿಮ್ಮಕ್ಕನನ್ನು ಅತ್ತೆಮನೆಯವರು ಬಂದು ಕರೆದುಕೊಂಡು ಹೋಗುವರಂತೆ. ಅವಳ ಗಂಡ ಓದು ಮುಗಿಸಿಕೊಂಡು ಊರಿಗೆ ಬರುತ್ತಾನಂತೆ. ಇನ್ನು ನಮ್ಮ ಅಡ್ಡಿ ಮೀರಿತಮ್ಮಾ.." ಎಂದರು.

" ಏನಣ್ಣಾ ! ನಾಳೆ ಬುಧವಾರ! ಇಷ್ಟು ಬೇಗ. ಆಮೇಲೆ ನಾನೊಬ್ಬಳೆಯೇ ? ನಾನೂ ಅವಳ ಜೊತೆ ಹೋಗುತ್ತೇನಣ್ಣಾ ! "

" ಅಯ್ಯೋ ಕಂದಮ್ಮಾ! 'ಕೊಟ್ಟ ಹೆಣ್ಣು ಕುಲಕ್ಕೆ ಹೊರಗೆ ' ಎಷ್ಟು ಮುದ್ದಾಗಿ ಸಾಕಿದರೇನು, ಏನು ಮಾಡಿದರೇನು ? ಹೆಣ್ಣು ಹೆತ್ತ ಜನ್ಮಕ್ಕೆ ಈ ಕಷ್ಟ ಬೇರೆ ತಪ್ಪಲಿಲ್ಲವೇ ? "

ತಂದೆಯವರಿಗೆ ಕಣ್ಣೀರು ತಡೆಯಲಾಗಲಿಲ್ಲ. ಅವರೊಡನೆ ನಾನೂ ಮಣಿಯೂ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದೆವು. ಸುತ್ತಲೂ ಕತ್ತಲು ಕವಿಯಿತು. ಒಬ್ಬರ ಬಾಯಲ್ಲಿಯೂ ಮಾತೇ ಹೊರಡದಾಗಿ ಒಳಕ್ಕೆದ್ದು ಹೋದೆವು.

ಅಂದು ಮನೆಯಲ್ಲಿ ಒಬ್ಬರಿಗೂ ಊಟ ಬೇಡ. ನಿದ್ದೆ ಬೇಡ. ಮಣಿ

ಯನ್ನು ಸಂತೈಸಲಾಗುತ್ತಿರಲಿಲ್ಲ.

ಬುಧವಾರ ಬಂದೇ ಬಂತು. ಕರೆಯಲು ಮಾವನವರು ಬಂದು ಬಿಟ್ಟರು. ಮಣಿ ನನ್ನ ಸಾಮಾನುಗಳನ್ನು ಸಿದ್ಧಮಾಡಿದಳು. ಹೂ ಕೊಯ್ದು ಕಟ್ಟಿದಳು. ಆದರೂ ಅವಳಿಗೆ ಬೆಪ್ಪು ಹಿಡಿದುಹೋಗಿತ್ತು. ರಾತ್ರಿಯ ರೈಲಿಗೆ ಹೊರಡುವುದೆಂದಾಗಿತ್ತು. ಎಲ್ಲರೂ ಸ್ಟೇಶನ್ನಿಗೆ ಹೋದೆವು. ನಾವು ಬಂಡಿಯನ್ನೇರುತ್ತಲೇ ತಂದೆಯ ದುಃಖ ಇಮ್ಮಡಿಸಿ "ಕಮಲಾ!" ಎಂದು ಏನನ್ನೋ ಹೇಳಲು ಯತ್ನಿಸಿದರು. ಕಂಠ ಬಿಗಿದು ಮುಂದೆ ಮಾತನಾಡಲಾಗಲಿಲ್ಲ. ನಾನೇ ಅಳುಗೊರಳಿನಿಂದಲೇ "ಅಣ್ಣಾ, ನನ್ನ ಬದಲಿಗೆ ದೇವರು ಮಣಿಯನ್ನು ಒದಗಿಸಿದ್ದಾನೆ. ಹೋಗಿಬರುತ್ತೇನೆ. ಮಣೀ! ತಂಗೀ!! ಅಳಬೇಡ. ತಪ್ಪದೆ ಕಾಗದ ಹಾಕುತ್ತಿರು". ಇಷ್ಟು ಹೇಳುತ್ತಿರುವಷ್ಟರಲ್ಲಿ ಬಂಡಿ ಸರಿಯಿತು. ಕಣ್ಣಿಗೆ ಕಾಣುವಷ್ಟು ದೂರ ಒಬ್ಬರನ್ನೊಬ್ಬರು ನೋಡುತ್ತಿದ್ದೆವು. ಒಂದೆರಡು ನಿಮಿಷಗಳಲ್ಲಿ ರೈಲು ಆ ಊರನ್ನೇ ದಾಟಿಬಿಟ್ಟಿತು.

o o o o

ತಂದೆಯವರನ್ನೂ ಮಣಿಯನ್ನೂ ಬಿಟ್ಟು ಬಂದು ಕೆಲವು ವರ್ಷಗಳಾದವು ತಂದೆಯವರು, ತಮಗೆ ಸ್ವಲ್ಪವೂ ಕಷ್ಟವಾಗದಂತೆ ಮಣಿ ನೋಡಿಕೊಳ್ಳುತ್ತಿದ್ದಾಳೆಂದೂ ಅವಳದು ಬಲು ಒಳ್ಳೆಯ ಗುಣವೆಂದೂ ಪತ್ರ ಬರೆಯುತ್ತಿರುತ್ತಾರೆ. ಇವೆಲ್ಲವೂ ಸರಿ. ಆದರೆ ಮುಂದೆ ಮಣಿಯ ಗತಿ? ಅವಳನ್ನು ಮದುವೆಯಾಗುವರ್‍ಯಾರು ? ಇವೆಲ್ಲವೂ, ನನ್ನ ಮನಸ್ಸಿಗೆ ಆಗಾಗ ಹೊಳೆದು, ಮರುಕ್ಷಣದಲ್ಲಿಯೇ 'ದೇವರಿದ್ದಾನೆ' ಎಂದು ಸಮಾಧಾನಗೊಳ್ಳುತ್ತಿದ್ದೆ.

ತಂದೆಯವರು ಪತ್ರ ಹಾಕಲು ತಪ್ಪಿದರೂ, ಮಣಿ ತಪ್ಪುತ್ತಿರಲಿಲ್ಲ. ಈ ದಿನವೂ ಊರಿನಿಂದ ಬರಬೇಕಾದ ಕಾಗದ ಬರಲಿಲ್ಲ. ತಂತಿ ಬಂತು "ತಂತಿ!' ಎನ್ನುವಾಗಲೆ ಎದೆ ಹಾರಿತು. ಒಡೆದು ನೋಡುವಲ್ಲಿ, ತಂದೆಗೆ ಸಖತ್ತಾಯಿಲೆ ಎಂದೂ ಕೂಡಲೇ ಬಂದರೆ ಮುಖ ನೋಡಲು ಸಿಕ್ಕುವದೆಂದೂ ತಿಳಿಯಬಂತು ನನಗೆ ದಿಕ್ಕೇ ತೋಚಲ್ಲಿಲ್ಲ. ಅದೇ ರಾತ್ರಿ, ಅತ್ತೆ ಮಾವ ಯಜಮಾನರೊಡನೆ ತವರೂರಿಗೆ ಪ್ರಯಾಣಮಾಡಿದೆ. ಇನ್ನೂ ನಮ್ಮ ಮನೆಯ

ಬಾಗಿಲಿಗೆ ಹೋಗುತ್ತಿದ್ದಂತೆಯೇ ಡಾಕ್ಟರರೊಬ್ಬರು ಬಂದು ನಮ್ಮೆಲ್ಲರಿಗೂ ಇನಾಕ್ಯುಲೇಷನ್‌ಮಾಡಿದರು. ಕಾರಣ? ತಂದೆಯವರಿಗೆ ಕಾಲರಾ ವ್ಯಾಧಿ. 'ಅಣ್ಣಾ ! ನಮ್ಮ ಕೈಬಿಟ್ಟೆಯಾ ?' ಎಂದು ಅವರ ಹಾಸಿಗೆ ಬಳಿಗೆ ಓಡಿದೆ. ಅವರ ಕಣ್ಣುಗಳು ಕೇವಲ ನನ್ನನ್ನೊಮ್ಮೆ ನೋಡಲು ಕಾದಿದ್ದವು. ನಾಲಿಗೆಯಲ್ಲಿ ಎರಡೇ ಕೊನೆ ಮಾತುಗಳಿದ್ದವೋ ಏನೋ? ನನ್ನನ್ನು ಕಾಣುತ್ತಲೇ ಕಣ್ಣು ನೀರಿನಿಂದ ತುಂಬಿತು. "ಕಂದಾ! ಹೋಗುತ್ತೇನೆ. ಸುಖವಾಗಿರು. ಮತ್ತೆ ಮಣೀ, ಮ... ಣೀ" ಎನ್ನುವುದರಲ್ಲಿ ನಾಲಿಗೆಯು ನಿಂತಿತು. ಜೀವನ ಕೊನೆಗೊಂಡಿತು. ಆದರೂ ಅವರ ಕಣ್ಣುಗಳು 'ಜಾತಿ ಯಾವುದಾದರೇನು ? ಪ್ರೀತಿ ಹಿರಿದು; ಮಣಿಯ ಕೈಬಿಡಬೇಡ' ಎನ್ನುವುದನ್ನು ಒತ್ತಿ ಹೇಳುತ್ತಿದ್ದವು.

ಮಣೀ! ಮಣೀ! ನೀನೇ ಧನ್ಯೆ! ಪುಣ್ಯಶಾಲಿನಿ! ನಮ್ಮ ಮನೆ ದೇವತೆ! ತಂದೆಯವರ ಅಂತ್ಯ ಸೇವೆಯನ್ನು ಅತ್ಯಂತ ಕಷ್ಟತರದ್ದಾದರೂ ಸಹಿಸಿ, ನಿನ್ನ ಪುಟ್ಟ ಕೈಗಳಿಂದ ಮಾಡಿ ಕೃತಾರ್ಥಳಾದೆ. ಹೊಟ್ಟೆಯಲ್ಲೇ ಹುಟ್ಟಿದ ನನಗೆ ಆ ಪುಣ್ಯವಿರದೆ ಹೋಯಿತು.

ಮಣಿಯ ಗೋಳು ವರ್ಣಿಸಲಸಾಧ್ಯ. ಎಷ್ಟು ಹಿಡಿದರೂ ನಿಲ್ಲಳು. ಅತ್ತು ಅತ್ತು ಕಣ್ಣುಗಳು ಬೆಂದು ಹೋಗಿವೆ. ಎಂಥ ಕೋಮಲ ಹೃದಯ ? ಕೆಲವೇ ವರ್ಷ ಸಾಕಿಸಿಕೊಂಡದ್ದಕ್ಕೆ ಎಷ್ಟು ಮಮತೆ! ಎಂಥ ಸೇವೆ ! ಎಂಥ ತ್ಯಾಗ! ಆದರ್ಶವಲ್ಲದೆ ಮತ್ತೇನು ?

ಹಿಂದೆ ಮಸುಕುಮಸುಕಾಗಿ ನನ್ನ ದೃಷ್ಟಿಗೆ ಗೋಚರಿಸುತ್ತಿದ್ದ ಮಣಿಯ ಪ್ರಶ್ನೆ ಈಗ, ಗಾಢವಾಗಿ ಬಂದು ನಿಂತಿತು. ಮುಂದೇನು ? ಅಕಾಲ ಮೃತ್ಯುವಿಗೆ ತುತ್ತಾದ ತಂದೆಯಿಂದಲೂ ಅವಳಿಗಾಗಿ ಏನನ್ನೂ ಮಾಡಲು ಸಾಧ್ಯವಿಲ್ಲವಾಯಿತು. ಮಾವನವರಾದರೋ ಸ್ಥಾವರ ಹಣ ಕಾಸು ಎಲ್ಲವನ್ನೂ ಶೋಧಿಸಿ ಮೂಟೆ ಕಟ್ಟಿದರು. ಮನೆ ಬರಿದಾಯಿತು. ಮಣಿಯನ್ನೂ ಜೊತೆಗೆ ಕರೆದೊಯ್ಯಬೇಕೆಂದು ಅತ್ತೆ ಮಾವಂದಿರಿಗೆ ಸೂಚಿಸಿದೆ. ಅದಕ್ಕೆ ಅವರು "ನಮ್ಮ ಸಂಸಾರವೇ ನಮಗೆ ಸಾಕಾಗಿದೆ. ಸಾಲದ್ದಕ್ಕೆ ಅವಳನ್ನು ಬೇರೆ ಕರೆದುಕೊಂಡು ಹೋಗಬೇಕೇನು ? ಅದೆಲ್ಲಾ ಆಗೋದಿಲ್ಲಾ" ಎಂದರು. "ಮನೆಗೆಲಸದವಳಂತಾದರೂ ಇರುತ್ತಾಳೆ.

ತಬ್ಬಲಿ ಹುಡುಗಿ. ಬೇರೆ ಯಾರೂ ದಿಕ್ಕಿಲ್ಲ ಪಾಪ ! '' ಎಂದೆ. ಅವರಿಗೆ ಕಡುಕೋಪವೇ ಬಂದುಬಿಟ್ಟಿತು. " ಆ ಮಣಿಯ ಸಂಗಡ ನೀನೂ ಬೇಕಾದರೆ ಇಲ್ಲೇ ಇರು. ಅವಳು ನಮ್ಮ ಬಾಗಿಲು ಮೆಟ್ಟಿದರೆ ಅನಿಷ್ಟ ಸುತ್ತಿಕೊಳ್ಳುತ್ತೆ " ಎಂದು ನಿಸ್ಸಂಕೋಚವಾಗಿ ಹೇಳಿಬಿಟ್ಟರು. ಇನ್ನುಳಿದವರು ಪತಿವರ್ಯರು! ಅವರು ಓದಿ ಓದಿ ಉದ್ಯೋಗವಿಲ್ಲದೆ, ಅಪ್ಪನ ಕೈಅನ್ನಕ್ಕೆ ಬಾಯಿಬಿಟ್ಟು ಕುಳಿತಿರುವವರು ! ಅವರನ್ನೂ ಕೇಳಿದ್ದಾಯಿತು. " ನನಗೆ ಕೆಲಸವಾಗಿ ಬೇರೆ ಸಂಸಾರ ಹೂಡಿದಾಗ ಬೇಕಾದರೆ ಅವಳು ಬರಲಿ. ಅಲ್ಲಿಯ ವರೆಗೂ ನಾನೇನನ್ನೂ ಹೇಳಲು ಸಾಧ್ಯವಿಲ್ಲ." ಎಂಬ ಉತ್ತರ ಬಂತು. ಮಣಿಯೊಂದು ಕಡೆ ' ಅಕ್ಕಾ ! ನನ್ನನ್ನೂ ಕರೆದುಕೊಂಡು ಹೋಗು. ನಾನಿನ್ನಾರ ಹತ್ತಿರ ಇರಲಿ. ?'' ಎಂದು ಇವರೆಲ್ಲರೆದುರಿಗೇ ಗೋಳಿಟ್ಟಳು. ಯಾರ ಕಲ್ಲೆದೆಯೂ ಕರಗಲಿಲ್ಲ ಅಪರಿಚಿತವಾದ ವಿಶಾಲ ವಿಶ್ವದ ನಡುವೆ ಚಿಕ್ಕ ಮಣಿಯನ್ನು ಬಿಟ್ಟು ಜೀವವೆಲ್ಲಾ ಅವಳ ಕಡೆಗೆ ಇದರೂ ಬೇರೆ ಉಪಾಯವೇ ಇಲ್ಲದಿದ್ದುದರಿಂದ, ಅತ್ತೆಯ ಮನೆಗೆ ಹೊರಟುಹೋದೆ.

○ ○ ○ ○

" ನಾಳೆ ಸಂಜೆಗೆ ಖಂಡಿತ ನಮ್ಮ ಮನೆಗೆ ದಯಮಾಡಿಸಬೇಕು. ಹುಡುಗೀಗೆ ಜೀವದಾನ ಮಾಡಿದಿರಿ. ನಿಮ್ಮನ್ನು ದೇವರು ಅಂತೀನಮ್ಮಾ ! ದಯಮ್ಮಾ' ಅಂದರೆ ಹೆಸರಿಗೆ ತಕ್ಕ ಹಾಗೀದೀರಿ ನೀವು!"

"ದಯವಿಟ್ಟು ಕ್ಷಮಿಸಿರಿ. ಅಷ್ಟೊಂದು ಗೌರವ ನನಗಲ್ಲ-ಆ ಸ್ವಾಮಿಗೆ ನೀವು ಆಕೆಯನ್ನು ಕರೆತಂದ ದಿವಸ, ಅದು ನಮ್ಮಿಂದ ವಾಸಿಯಾಗುವ ಖಾಯಿಲೆ ಅಲ್ಲವೆಂದೇ ನನಗೆ ತಿಳಿದುಬಂತು. ಏನೋ ದೇವರ ಮೇಲೆ ಭಾರಹಾಕಿ ಉಪಚರಿಸಿದೆ. ವಾಸಿ ಆಯಿತಲ್ಲ. ಅದೇ ದೊಡ್ಡ ಸಂತೋಷ ನನಗೆ. ನೀವೇ ನೋಡುತಾ ಇದ್ದೀರಲ್ಲಾ-ನಾನೇ ಸ್ವತಃ ನೋಡಿಕೊಳ್ಳ ಬೇಕಾದ ಕೆಲಸಗಳು ಬೇಕಾದಷ್ಟಿವೆ. ಆದ್ದರಿಂದ ನಾಳೆ ಬರಲು ಸಾಧ್ಯ ವಿಲ್ಲ. ಅದೂ ಅಲ್ಲದೆ, ಅಷ್ಟು ಅಗತ್ಯದ ಕೆಲಸವೇನಿದೆ ? ಮಗೂ ತಾಯಿ ಸೌಖ್ಯವಾಗಿದ್ದಾರೆಯಷ್ಟೇ ? "

" ಇದ್ದಾರಮ್ಮಾ , ಇದ್ದಾರೆ; ಅದಕ್ಕಲ್ಲ. ಏನೋ ನಮ್ಮ ಒಂದು

ಲೋಟಾ ಸೀ ನೀರಾದ್ರೂ ಸಿಮಗೆ ಕೊಡೋಣಾ ಅಂತ. ನೀವು ಮಾಡಿರೋ ಉಪಕಾರಕ್ಕೆ ಪ್ರತಿಯಾಗಿ ನನ್ನ ಕೈಲೇನ್ಮಾಡೋದಕ್ಕಾಗುತ್ತೇ ಹೇಳಿ, ದಯಮ್ಮಾ ! ''

'' ಅಮ್ಮಾ ! ನೀವು ಉತ್ತಮರು: ನಾವು ಕೀಳು ಜಾತಿಯವರು; ನಿಮ್ಮ ದಯ ಒಂದಿದ್ದರೆ ಸಾಕು. ಉಪಚಾರವೇಕೆ ತಾಯಿ ? ''

'' ಯಾವ ಜಾತಿ ಆದರೇನು ದಯಮ್ಮಾ? ಹುಟ್ಟುವಾಗ ಜಾತಿ ಇರುತ್ತೇಯೇ ? ಹೋಗುವಾಗ ಜಾತಿ ಹೋಗುತ್ತೆಯೇ ? ಗುಣ ದೊಡ್ಡದಮ್ಮಾ ! ''

ಕಮಲೆಯ ಅತ್ತೆಗೂ ಆಸ್ಪತ್ರೆಯ ಹೆಡ್ ನರ್ಸಿಗೂ ಸಂಭಾಷಣೆ ನಡೆಯುತ್ತಿರುವಾಗಲೇ ಕಮಲೂ ಯಜಮಾನರು ಅಲ್ಲಿಗೆ ದಯಮಾಡಿಸಿ, ಬಹಳ ಕೃತಜ್ಞತಾಭಾವವನ್ನು ಸೂಚಿಸಿದರು. ಮತ್ತು ಬಲವಂತಮಾಡಿ ಆಕೆಯನ್ನು ಮನೆಗೆ ಬರಲು ಒಪ್ಪಿಸಿದರು.

ಮರುಸಂಜೆ, ದಯಮ್ಮನವರಿಗೆ ಸತ್ಕಾರ. ಎಲ್ಲರೂ ಒಟ್ಟಾಗಿ ಕುಳಿತು ಮಾತನಾಡುತ್ತಾ ಕಾಫೀ ತಿಂಡಿ ತಿಂದರು. ಮನೆ ಮಂದಿ ಎಲ್ಲಾ ಅವರನ್ನು ಬಾಯಿತುಂಬಾ ಹೊಗಳಿದರು; ಕಮಲೂ ಮಾತ್ರ ಹೆಚ್ಚು ಮಾತನಾಡಲೇ ಇಲ್ಲ! ಎವೆ ಇಕ್ಕದೆ ದಯಮ್ಮನ ಮುಖ ನೋಡುತ್ತಿದ್ದಳು. ಒಬ್ಬರನ್ನೊಬ್ಬರು ನೋಡಿದರು. ಏನೋ ಅರ್ಥ ಮಾಡಿಕೊಂಡರು. ಹೊರಡುವಾಗ ಕಮಲು " ದಯಮ್ಮಾ, ನನಗೋಸ್ಕರ ನೀವಿನ್ನೊಂದು ದಿವಸ ನಮ್ಮಲ್ಲಿಗೆ ಬರಲು ಸಾಧ್ಯವೇ ? " ಎಂದಳು. " ಸಾಧ್ಯವಾದರೆ ಬರುತ್ತೇನಮ್ಮಾ '' ಎನ್ನುತ್ತಾ ಎಲ್ಲರಿಗೂ ವಂದಿಸಿ ದಯಮ್ಮ ಹೊರಟು ಹೋದರು.

ಒಂದು ವಾರದನಂತರ ನರ್ಸ್ ದಯಮ್ಮನವರಿಂದ ಒಂದು ಭಾಂಗಿಯೂ ಒಂದು ಪತ್ರವೂ ಕಮಲೆಯ ಹೆಸರಿಗೆ ಬಂದವು. ಮಗುವಿಗೊಂದು ಭಂಗಾರದ ಉಂಗುರ, ಎರಡು ಸಿಲ್ಕಿನ ಅಂಗಿಗಳು, ಮತ್ತೆರಡು ಉಣ್ಣೆಯ ಅಂಗಿಗಳೂ ಇದ್ದವು. ಪತ್ರದ ಒಕ್ಕಣೆ ಹೀಗಿತ್ತು —

''ಪ್ರಿಯ ಅಕ್ಕ ಕಮಲೂ !

ನಿನ್ನ ಮತ್ತು ಮಗುವಿನ ಕ್ಷೇಮಕ್ಕೆ ಆಗಾಗ ತಿಳಿಸುತ್ತಿರು. ನಾನಾರೆಂಬುದು ನಿನಗಾಗಲೇ ಊಹೆಗೆ ಸಿಕ್ಕಿದೆ ಎಂದು ತಿಳಿದುಕೊಂಡೆ.

ನಿನ್ನ ಊಹೆ ಸತ್ಯ. ನಿನ್ನ ಬಡ ಸಹೋದರಿ 'ಮಣಿ'ಯೇ ನಾನು.

ನನ್ನೊಬ್ಬಳನ್ನೇ ನೀನು ಬಿಟ್ಟು ಹೋದೆ. ಅದು ನಿನ್ನ ತಪ್ಪಲ್ಲವೆಂದು ಚೆನ್ನಾಗಿ ಬಲ್ಲೆ. ಮುಂದೇನೂ ತೋರದೇ ಅಲ್ಲಿಯೇ ಒಂದು ಮರದಡಿಯಲ್ಲಿ ಕುಳಿತು ಬಿಟ್ಟೆ. ಆಗ, ವಾಯುಸೇವನೆಗಾಗಿ ಬಂದಿದ್ದ ಒಬ್ಬ ಆಂಗ್ಲ ರಮಣಿ ನನ್ನನ್ನು ನೋಡಿ, ನನ್ನ ವಿಚಾರವನ್ನೆಲ್ಲಾ ಕೇಳಿ, ಕನಿಕರದಿಂದ ತನ್ನ ಮನೆಗೆ ಕರೆದೊಯ್ದಳು. ಮರುದಿನದಿಂದಲೇ ಬೋರ್ಡಿಂಗ್ ಸ್ಕೂಲಿನಲ್ಲಿ ನಾನೊಬ್ಬ ವಿದ್ಯಾರ್ಥಿನಿಯಾದೆ. ಅಲ್ಲಿಯ ವ್ಯಾಸಂಗ ಪೂರೈಸುತ್ತಲೇ ದಾದಿ ಸ್ಕೂಲಿಗೆ ಕಳಿಸಿ, ಆಕೆ ಸೀಮೆಗೆ ಹೊರಟುಹೋಗುವಾಗ ನನ್ನನ್ನು ಈಗ ನಾನಿರುವ ಕೆಲಸಕ್ಕೆ ಸೇರಿಸಿ ಹೊರಟು ಹೋದರು. ಇನ್ನೇನೂ ಭಯವಿಲ್ಲ. ಹಿಂದೆ ಅಣ್ಣಾ ಮತ್ತು ನಿನ್ನ ರೂಪದಲ್ಲಿಯೂ ನಂತರ ಆ ಆಂಗ್ಲ ರಮಣಿಯ ರೂಪದಲ್ಲಿಯೂ ದೇವರೇ ಬಂದು ನನ್ನನ್ನು ಕಾಪಾಡಿದ್ದಾನೆ. ನಿಮ್ಮೆಲ್ಲರಿಗೆ ನಾನು ಚಿರಋಣಿ.

ನಿಮ್ಮ ಅತ್ತೆ ಮನೆಯವರು ನಿನ್ನನ್ನು ಆಸ್ಪತ್ರೆಗೆ ತಂದ ದಿನವೇ ನಾನು ನಿನ್ನನ್ನು ಗುರ್ತಿಸಿದೆ. ಆದರೂ ನಿನಗೆ ಕಷ್ಟವಾಗದಿರಲೆಂದು ಇದುವರೆಗೂ ತಿಳಿಸಿರಲಿಲ್ಲ. ಮೇಲಾಗಿ ನಿನ್ನ ದೇಹಸ್ಥಿತಿಯೂ ಅನುಮಾನಾಸ್ಪದವಾಗಿತ್ತು. ಅದರಿಂದ ಮನಸ್ಸೂ ಹೆದರಿ ಹೋಗಿತ್ತು.

ನಿಮ್ಮ ಮನೆಯವರು ಅಂದು ನನಗೆ ಸತ್ಕಾರ ಕೊಟ್ಟದ್ದನ್ನು ನೋಡಿ, ಹಿಂದಿನದೆಲ್ಲವನ್ನೂ ನೆನೆದು ನನಗೆ ನಗು ಬಂತು. ಮಾಡುವುದೇನು ? ಹಿಂದೂ ಸಮಾಜದ ಗತಿ ಹೀಗಿರುವಾಗ ಭಾರತದ ಮಕ್ಕಳ ಗತಿ ಇನ್ನೇನಾದೀತು ? ಅಕ್ಕಾ ಈಗ ಹೆಚ್ಚಾಗಿ ಬರೆಯುವದಿಲ್ಲ.

ಉಂಗುರ, ಅಂಗಿ ಮಗುವಿನ ಅಳತೆಗೆ ಸರಿ ಹೋದುವೆ ? ತಿಳಿಸು. ಮನೆಯವರಿಗೆಲ್ಲಾ ನನ್ನ ವಿಚಾರಗಳೊಂದಿಗೆ ವಿನಯಪೂರ್ವಕ ನಮಸ್ಕಾರಗಳನ್ನು ತಿಳಿಸು. ಎಂದಿನಂತೆ ಪ್ರೇಮವಿರಲಿ.

ಇತಿ, ನಿನ್ನ ಪ್ರೀತಿಯ ತಂಗಿ
ದಯಾಮಣಿ."

# ಕನ್ಯಾರ್ಥಿ

"ಹನ್ನೆರಡು ವರ್ಷದ ತನಕಾ ನಾವು ಹೆಣ್ಣು ಮಕ್ಕಳನ್ನು ಬೆಳೆಸಿರಲಿಲ್ಲವಮ್ಮಾ! ಅದೇನು ನಮ್ಮ ಕರ್ಮವ್ರೋ, ಒಬ್ಬರಾದರೂ 'ವರಾ' ಅನ್ನಿಸಿಕೊಂಡಿರುವವರು 'ನಿಮ್ಮ ಮನೇಲಿ ಹೆಣ್ಣಿದೆಯೋ ?' ಅಂತಾ ಕೇಳೋದಿಕ್ಕೇ ಬರವಲ್ಲರು. ನನ್ನ ಹಣೇಲಿ ಆ ಹುಡುಗಿ ಕೈ ಕಂಕಣ ನೋಡೋದು ಬರೆದಿದೆಯೋ? ಇಲ್ಲವೇ ಇಲ್ಲವ್ರೋ!"

ಬೆಳಿಗ್ಗೆ ಎದ್ದರೆ ಸಂಜೆ ತನಕ ಅಜ್ಜಿಗೆ ಇದೇ ಹಾಡು ಮನೆಗೆ ಬಂದವರ ಎದುರಿಗಂತೂ ಈ ಮಾತು ಬಿಟ್ಟರೆ ಬೇರೆ ಮಾತೇ ಇಲ್ಲ ಮಂಗಳಗೌರೀ ಪೂಜೆ ಮಾಡಿದ ಹುಡುಗಿಯರು ಅರಸಿನ ಕುಂಕುಮಕ್ಕೆ ಕರೆಯುವುದಕ್ಕೆ ಬಂದರೆ 'ಬರೋ ವರ್ಷವಾದರೂ ನಮ್ಮ ಶಾರದೆ ಗೌರೀಪೂಜೆಮಾಡಿ, ಈ ಹುಡುಗಿಯರ ಹಾಗೆ ಬಣ್ಣಗೆ ಓಡಾಡಿದ್ದು ನೋಡುತ್ತೀನೆಯೋ? "ಎಂದು ಕಣ್ಣೊರಸಿಕೊಳ್ಳುವಳು. ಅವಳೇಕೆ ಇಷ್ಟು ಕೊರಗುತ್ತಾಳೆನ್ನುವುದೇ ನನಗೆ ಅರ್ಥವಾಗುತ್ತಿರಲಿಲ್ಲ.

ಒಂದು ದಿನ ನಮ್ಮ ತಂದೆ ಕೋರ್ಟಿಗೆ ಹೋಗಿದ್ದರು. ಐದೂವರೆ ಗಂಟೆಯಾದರೂ ಇನ್ನೂ ಮನೆಗೆ ಬಂದಿರಲಿಲ್ಲ. ಮನೆಯಲ್ಲಿ ಅಜ್ಜಿ, ನಮ್ಮ ತಾಯಿ, ನಾನು ಇಷ್ಟೇ ಜನರಿದ್ದೆವು. ಆಗ ಯಾರೋ ಒಬ್ಬರು, ಒಂದು ಹುಡುಗನೊಡನೆ ನಮ್ಮ ಮನೆಯ ಬಾಗಿಲಿಗೆ ಬಂದರು. ಅವರು ಯುವಾವಸ್ಥೆಯನ್ನು ದಾಟಿದ್ದರೂ ವೃದ್ಧರೆನಿಸಿಕೊಂಡಿರಲಿಲ್ಲ. ಸುಮಾರು ನಲವತ್ತು ವರುಷವೆನ್ನಬಹುದು. ಆ ಹುಡುಗ ಅವರಿಗಿಂತ ಒಂದು ಹೆಜ್ಜೆ ಹಿಂದೆ ನಿಂತಿದ್ದ. ಬಂದವರು ! ಚೆಂಡಾಡುತ್ತ ಕುಳಿತಿದ್ದ ನನ್ನನ್ನು " ತಂದೆಯವರು ಮನೆಯಲ್ಲಿದ್ದಾರೇಯೇನಮ್ಮಾ! " ಎಂದು ಕೇಳಿದರು.

"ಇಲ್ಲ. ಇವತ್ತು ಅಣ್ಣಾವರು ಇನ್ನೂ ಕೋರ್ಟಿನಿಂದ ಬಂದೇ ಇಲ್ಲ" ಎಂದು ಬಿಟ್ಟು ಮತ್ತೆ ಚೆಂಡಾಟಕ್ಕೆ ಹೊರಟು ಹೋದೆ. ಆ ಹೊತ್ತಿಗೆ ಸರಿಯಾಗಿ ಅಜ್ಜಿ ಪುರಾಣಕ್ಕೆಹೋಗುವುದಕ್ಕೆಂದು ಬಾಗಿಲಿಗೆ ಬಂದಳು. ಬಂದವರನ್ನು ನೋಡಿ " ಯಾರಪ್ಪಾ ? " ಎಂದಳು.

" ಕೇಶವರಾಯರ ಮನೆ ಇದೇ ತಾನೆ ? "

"ಹೌದಪ್ಪ ಹೌದು. ಒಳಕ್ಕೆ ಬನ್ನಿ. ಯಾಕೋ ಕೇಶೂ ಇವತ್ತು ಇಷ್ಟು ಹೊತ್ತಾದರೂ ಮನೆಗೆ ಬಂದಿಲ್ಲ. ಇನ್ನೇನು ಬಂದುಬಿಡುತ್ತಾನೆ. ಬನ್ನಿ, ಕೂತುಕೊಳ್ಳಿ."

ಅವರು ಅತ್ತಿತ್ತ ನೋಡುತ್ತಾ, ಅನುಮಾನಿಸುತ್ತಾ ಒಳಕ್ಕೆ ಬಂದು ಕುಳಿತರು. ಅಜ್ಜಿಯೂ ತನ್ನ ಪುರಾಣದ ಮನಸ್ಸನ್ನು ಎಳೆದು, ಅವರೊಡನೆ ಮಾತಿಗೆ ಮೊದಲುಮಾಡಿದಳು.

"ಇದೇ ಊರೋ ಪರಸ್ಥಳವೋಪ್ಪಾ ?"

"ಸದ್ಯಕ್ಕೆ ಇದೇ ಊರೇ ಆಗಿದೆ. ನಿಮ್ಮಲ್ಲಿ ಕನ್ಯಾ ಇದೇ ಅಂತಾ ಕೇಳಿದೆವು. ಆದ್ದರಿಂದ ರಾಯರನ್ನು ಸ್ವಲ್ಪ ಕಂಡು ಹೋಗೋಣಾ ಎಂದು ಬಿಟ್ಟೊ. ...."

"ಹಾಗೇ ? ಒಳ್ಳೇದಪ್ಪಾ! ಕೂತುಕೊಳ್ಳಿ. ಈಗ ನಮ್ಮ ಕೇಶುನೂ ಬಂದುಬಿಡ್ತಾನೆ. ಇನ್ನೇನು ಬರೋ ಹೊತ್ತೇ ಆಯಿತು. ಇವನೇನು ನಿಮ್ಮ ಮಗನೇನ್ರಪ್ಪಾ? ಎಷ್ಟು ಜನ ಮಕ್ಕಳು ನಿಮಗೆ ?"

"ಹೌದು. ಇವನೇ ದೊಡ್ಡವನು. ಹದಿನೆಂಟನೇ ವರ್ಷ ಇದು ಇನ್ನೂ ಎರಡು ಹೆಣ್ಣುಮಕ್ಕಳು ಇವೆ. ಅವು ಇನ್ನೂ ತೀರ ಚಿಕ್ಕವು. ಇವನ್ನೆಲ್ಲ ನನ್ನ ತಲೆಗೆ ಕಟ್ಟಿ ಬಿಟ್ಟು ಅವಳು ಮಾತ್ರ ನಡೆದು ಬಿಟ್ಟಳು. ಆಫೀಸಿಗೆ ಹೋಗಲೆ, ಈ ಮಕ್ಕಳನ್ನು ಸುಧಾರಿಸಲೇ!"

"ಅಯ್ಯೋ ಪಾಪ! ಮಕ್ಕಳನ್ನು ಸುಧಾರಿಸೋದಕ್ಕೆ ಗಂಡಸರ ಕೈಯ್ಯಲ್ಲಾಗುತ್ಯೇಪ್ಪಾ? ನಾಲ್ಕು ದಿನವೇ? ಎಂಟು ದಿನವೇ? ಸುಧಾರಿಸೋದಕ್ಕೇ? ಮನೆಗೆ ಒಂದು ಹೆಣ್ಣು ಅಂತಾ ಬಂದು ನಿಲ್ಲೋವರಿವಿಗೂ ಕಷ್ಟಪಾ. ಕಷ್ಟ."

"ಅದೇ ನೋಡಿ, ಈಗ ಎಲ್ಲರೂ ಹೇಳುತ್ತ ಇರೋದು. ಮನೆಯಲ್ಲಿ ಹೆಂಗಸೂ ಅಂತ ಇದ್ದರೆ ಮಕ್ಕಳನ್ನು ನೋಡಿಕೊಳ್ಳುವುದು ಅಲ್ಲದೆ, ಮನೆಗೆ ಎಷ್ಟೋ ಕಳೆ ಇರುತ್ತದೆ ಆದ್ದರಿಂದಲೇ ನಾವು ಈ ಪ್ರಯತ್ನಕ್ಕೆ ಹೊರಟಿರುವುದು."

ಇಷ್ಟು ಮಾತುಗಳು ಆಗುತ್ತಿದ್ದಾಗ್ಗೆ ನಾನು ಅಜ್ಜಿಯ ಮಗ್ಗುಲಿಗೆ ಬಂದು ಕುಳಿತುಬಿಟ್ಟೆ. ದೊಡ್ಡವರು ಮಾತನಾಡುತ್ತಿರುವುದನ್ನು ಚಿಕ್ಕವರು

ಕೇಳುತ್ತಾ ಕೊಡಬಾರದೆಂಬುದು ಅವಳ ಅಭಿಪ್ರಾಯ. ಅವಳು ನನ್ನ ಕಡೆ ನೋಡಿದ ಕೂಡಲೇ "ಶಾರದೂ! ಹೀಗೆಲ್ಲಾ ಕೂತಕೋತಾರೇನಮ್ಮಾ ತಾಯಿ! ಒಳಗೆ ನಡಿ" ಎಂದು ನನ್ನನ್ನು ಕರೆದುಕೊಂಡು ಅಡಿಗೆ ಮನೆಗೆ ಬಂದಳು. ನಮ್ಮ ತಾಯಿಯ ಕಿವಿಯಲ್ಲಿ ಏನೇನೋ ಪಿಸುಗುಟ್ಟಿ, ತಿರುಗಿ ಹೋಗಿ ಮಾತಿಗೆ ಕೂತಳು.

ಒಳಗೆ ಸಿಹಿಸಜ್ಜಿಗೆ, ಬೋಂಡಾ, ಕಾಫೀ ಸಿದ್ಧವಾಯಿತು. ನಮ್ಮ ತಾಯಿ ನನಗೆ ಜಡೆ ಹೆಣೆದು, ಹೂ ಮುಡಿಸಿ ಶೃಂಗರಿಸಿದರು. ದೊಡ್ಡದೊಂದು ಜರಿಯ ಸೀರೆಯನ್ನು ಉಡಿಸಿದರು. "ಸೀರೆ ಭಾರ ಕಣಮ್ಮಾ! ನನ್ನ ಹೊಸ ಲಂಗ ಹಾಕಿಕೊಳ್ಳುತ್ತೇನೆ." ಎಂದಿದ್ದಕ್ಕೆ ಸೀರೆ ·ಎತ್ತಿ ಕೊಂಡಿದ್ದೂ ಅಲ್ಲದೆ ಬೈಗಳನ್ನೂ ತಿಂದಿದ್ದಾಯಿತು. ಆ ಸೀರೆ ಯಾತಕ್ಕಾದರೂ ನಮ್ಮಲ್ಲಿದೆಯಮ್ಮಾ! ಯಾರು ನಮ್ಮ ಮನೆಗೆ ಬಂದರೂ ನನಗೆ ಆ ಸೀರೆ ಸುತ್ತಿಬಿಡುತ್ತಾರೆ. ಆದರೆ, ಅದು ನಮ್ಮಲ್ಲಿಲ್ಲದಿದ್ದರೆ ಅಂಥಾದನ್ನೇ ಮತ್ತೆಲ್ಲಿಂದಲಾದರೂ ತಂದು ಉಡಿಸಿಯೇ ಉಡಿಸುತ್ತಾರೆಂದು ಆಗ ನನಗೆ ತಿಳಿದಿರಲಿಲ್ಲ.

ನನಗಂತೂ 'ಒಳಗೆ ಇರು' ಎಂದ ಅಜ್ಜಿಯ ಮೇಲೆಯೂ ಆ ಸೀರೆಯುಡಿಸಿದ ಅಮ್ಮನ ಮೇಲೆಯೂ ಸಿಟ್ಟು. ಸಾಲದುದಕ್ಕೆ ಅವರೆಲ್ಲ ಹೊರಟುಹೋದ ಮೇಲೆ ನನಗೆ ತಿಂಡಿ ಕೊಡುತ್ತೇನೆಂದುದು ಇನ್ನೂ ಸಿಟ್ಟೇರಿತು.

ಬಂದವರಿಗೆ ಫಲಾಹಾರ ಆದಮ್ಯೇಲೆ ನನಗೆ ತಿಂಡಿ ಕೊಡುತ್ತೇನೆಂದು ಹೇಳಿದುದರಿಂದ ನನಗೆ ಇನ್ನೂ ಸಿಟ್ಟೇರಿತು.

ಬಂದವರಿಗೆ ಫಲಹಾರ ಆದ ಮೇಲೆ ಅಜ್ಜಿ "ಶಾರದೇ! ಬಾ, ಮಗೂ ಇಲ್ಲಿ!" ಎಂದು ಕೂಗಿದರು ಹೋಗಿ ಅಜ್ಜಿಯ ಮಗ್ಗುಲಲ್ಲಿ ಕುಳಿತುಕೊಂಡೆ. ಅವಳು ನನ್ನ ಮುಂದಲೆಯನ್ನು ನೇವರಿಸುತ್ತ "ಇವಳೇ ನೋಡಿ ನಮ್ಮ ಶಾರದೆ. ಕೇಶೂಗೆ ಹಿರೇಹುಡುಗಿ. ಕತ್ತಿಗೆ ತಾಳೀ ಕಟ್ಟಿ ಬಿಡಬೇಕೂ ಅಂತ ನಮ್ಮ ಸಂಕಲ್ಪ. ಭಗವಂತನ ದಯದಿಂದ ಆಗಬೇಕು."

"ಸರಿಯೇ! ನಮಗೂ ಒಳ್ಳೇ ಮನೆತನಸ್ಥರ ಮನೆ ಹುಡುಗಿಯೇ ಆಗಬೇಕು. ಹೆಣ್ಣಿನವರನ್ನು 'ಅದು ಕೊಡಿ, ಇದು ಕೊಡಿ' ಎಂದು ಕೇಳುವ ಸಂಪ್ರದಾಯವನ್ನೇ ನಾವಿಟ್ಟಿಲ್ಲ. ನಮಗೇನು ದೇವರು ಕಡಿಮೆ

ಮಾಡಿಲ್ಲ ಒಂದಿಷ್ಟು ಭೂಮಿಯೂ ಇದೆ; ಮನೆ ಇದೆ; ಅವಳು ಬದುಕಿದ್ದಾಗ ಮಾಡಿಸಿಕೊಂಡಿದ್ದ ಚಿನ್ನ ಬೆಳ್ಳಿಯೂ ತಕ್ಕಮಟ್ಟಿಗಿದೆ. ಸರಿ. ಈ ಹುಡುಗನ್ನ ಒಂದು ಕೆಲಸಕ್ಕೆ ತಗಲಸಿಬಿಟ್ಟರೆ ತೀರಿತು. ಹೆಣ್ಣು ಮಕ್ಕಳು ಕೊಟ್ಟ ಮನೆಯಲ್ಲಿ ಬದುಕಿಕೊಳ್ಳುತ್ತವೆ. ಇಷ್ಟೇ ನಮ್ಮ ಅಭಿಪ್ರಾಯ. ''

“ ನಿಮ್ಮ ಹುಡುಗನಿಗೇನಪ್ಪಾ ಕೆಲಸಕ್ಕೆ? ದೊರೆ ಮಗನ ಹಾಗಿದ್ದಾನೆ. ಕೈಹಿಡಿಯುವವಳು ಪುಣ್ಯ ಮಾಡಿರಬೇಕು. ಮುಖ್ಯವಾಗಿ ನಮ್ಮ ನಿಮ್ಮ ಸಂಬಂಧ ಬೆಳೆಸುವದರಲ್ಲಿ ಋಣಾನುಬಂಧವಿರಬೇಕು. ನನ್ನ ಮಗ ಬಂದರೂ ಇಷ್ಟೇ ಹೇಳೋದು ”

“ ಆಗಬಹುದು. ದೈವಾನುಕೂಲವಿದ್ದಲ್ಲಿ ಈ ಸಂಬಂಧ ಬೆಳೆಸುವದರಲ್ಲಿ ಯಾವ ಅಡ್ಡಿಯೂ ಇಲ್ಲ. ನಿಮ್ಮ ಶಕ್ತ್ಯನುಸಾರ ಧಾರೆ ಎರೆದು ಕೊಡಿ. ಇದೇ ಮಾತನ್ನೇ ರಾಯರಿಗೂ ತಿಳಿಸುತ್ತೇನೆ. ”

“ನೀವು ಸತ್ಯಕಾಲದಲ್ಲಿ ಹುಟ್ಟಿದವರಪ್ಪಾ ! ಇಲ್ಲದಿದ್ದರೆ ನಿಮ್ಮ ಬಾಯಲ್ಲಿ ಈ ಮಾತುಗಳು ಬರೋಣಾ ಅಂದರೇನು ! ”

ನಾನು ಆ ಹುಡುಗನನ್ನು ನೋಡಿದೆ. ಅವನೂ ನನ್ನನ್ನು ನೋಡುತ್ತಿದ್ದ. ನನ್ನ ಸೀರೆಯೊಂದು ಕಡೆ ಜಾರಿ ಜಾರಿ ಹೋಗುತ್ತಿತ್ತು. ಅಜ್ಜಿ ಮಾತಿನ ಭರದಲ್ಲಿದ್ದಾಗ ಮೆಲ್ಲಗೆ ಎದ್ದು ಹೊರಗೆ ಬಂದು ಬಿಟ್ಟೆ. ಸದ್ಯ ನನ್ನ ಲಂಗ ಕಂಡೇನೇ ಎನ್ನಿಸಿತು.

ತಂದೆಯವರಿಗೆ ಅತಿಥಿಗಳ ಪರಿಚಯವಾಯಿತು. ಅವರನ್ನು ಕರೆದುಕೊಂಡು ದಿವಾನಖಾನೆಗೆ ಹೊರಟುಹೋದರು.

o o o o

ರಾತ್ರಿ ಊಟವಾಗುತ್ತಿತ್ತು. ಅಜ್ಜಿ “ಕೇಶೂ! ಏನು ಹೇಳಿದರಪ್ಪಾ! ಒಪ್ಪಿದರೇ ?” ಎಂದರು. ತಂದೆಯವರಿಗೆ ತಡೆಯಲಾರದಷ್ಟು ನಗು. “ ಅವರೇನೋ ಒಪ್ಪಿಕೊಂಡೇ ಬಂದಿದ್ದರು. ನಾನೇ ಸಾಧ್ಯವಿಲ್ಲ ಎಂದು ಬಿಟ್ಟೆ ” ಎಂದರು.

“ಅದೇಕೆ ಮಗೂ ಹೀಗೆ ಮಾಡಿಬಿಟ್ಟೆ? ನಾನು ಏನೇನೋ ಹೇಳಿ ಒಪ್ಪಿಸಿದ್ದೆ ಕಣೋ ! ಇನ್ನು ಅಂಥಾ ‘ವರ’ ನಮಗೆ ಸಿಕ್ಕುತ್ತೇನೋ ಕೇಶೂ ! ಬೇಕಾದಷ್ಟು ಪುಣ್ಯವಂತರಪ್ಪಾ !! ”

ನಡುವೆ ನಮ್ಮ ತಾಯಿಯೂ ಬಾಯಿ ಹಾಕಿ " ಹುಡುಗ ಇನ್ನೂ ಚಿಕ್ಕವನಾದರೆ ಏನಾಯಿತೂ ಅಂದ್ರೇ ! ನಮ್ಮ ಶಾರದೆಗೆ ಏನು ಹದಿನಾರು ವರ್ಷ ಆಗಿಹೋಯಿತೇ? ಕೃಷ್ಣನ ಹಾಗಿದ್ದಾನೆ ಹುಡುಗ. ಇಂಟರ್ ಮೀಡಿಯೇಟ್ ಪರೀಕ್ಷೆಗೆ ಓದುತ್ತಿದ್ದಾನಂತೆ. ಅದೇಕೆ ಹೀಗೆ ಮಾಡಿಬಿಟ್ಟಿರಿ ? " ಎಂದರು.

ತಂದೆಯವರಿಗೆ ದಿಕ್ಕು ತೋಚದಂತೆ ಮಾತಿನ ಮಳೆಯಾಯಿತು. ಅವರು ಎರಡು ನಿಮಿಷ ಸುಧಾರಿಸಿಕೊಂಡು ನಿಧಾನವಾಗಿ "ಯಾಕೆ ಹೀಗೆ ಸುಮ್ಮನೆ ಕೂಗಾಡ್ತಿದ್ದೀರಿ? ಹೇಳುವುದನ್ನು ಸ್ವಲ್ಪ ಕೇಳಿ! ಬಂದಿದ್ದವರಲ್ಲಿ ಯಾರನ್ನು 'ವರಾ' ಅಂತಾ ತಿಳಿದುಕೊಂಡಿದ್ದೀರಿ ? ಹೇಳಿ ಸ್ವಲ್ಪ" ಎಂದರು.

" ಅದೇಕೋ ಹೀಗೆ ಕೇಳ್ತೀ ? ಕರೆದುಕೊಂಡು ಬಂದಿದ್ರಲ್ಲಾ ಮಗನ್ನೂ ವೆ. ನಿನಗೆ ಕಾಣಿಸಲಿಲ್ವೇ ?"

" ಆ ಹುಡುಗನೂ ಬಂದಿತ್ತಲ್ಲಾ ಅಂದ್ರೇ !''

" ಅದಕ್ಕೇ ನೋಡಿ ನಾನು ಹೇಳುವುದು, ಯಾವುದನ್ನೂ ಸರಿಯಾಗಿ ಅರ್ಥ ಮಾಡಿಕೊಳ್ಳಬೇಕು; ದುಡುಕಬಾರದು ಎನ್ನೋದು 'ವರ' ಎನ್ನಿಸಿಕೊಂಡಿರುವವನು ಆ ಹುಡುಗನಲ್ಲಾ. ಅವರಪ್ಪ! ತಿಳಿಯಿತೇ ?"

ಅಜ್ಜಿ, ಅಮ್ಮ ಇಬ್ಬರೂ ಒಬ್ಬರೊಬ್ಬರ ಮುಖವನ್ನು ನೋಡಿಕೊಂಡು ಪೆಚ್ಚಾದರು. ಆ ಮೇಲೆ ಇಬ್ಬರೂ ಮಾತನಾಡಲಿಲ್ಲ

೦ ೦ ೦ ೦ ೦

ನಮ್ಮ ಅಜ್ಜಿ, ತಂದೆಯವರೂ ತೀರಿಕೊಂಡು ನಾಲ್ಕು ವರುಷಗಳಾಗಿ ಹೋಗಿವೆ. ನಾವಿದ್ದ ದೊಡ್ಡ ಮನೆಯನ್ನು ಬಾಡಿಗೆಗೆ ಕೊಟ್ಟು, ಚಿಕ್ಕದೊಂದು ಬಾಡಿಗೆ ಮನೆಯಲ್ಲಿ ವಾಸಿಸುತ್ತಿದ್ದೆವು. ಇದ್ದವರು ನಾನು ಮತ್ತು ನಮ್ಮ ತಾಯಿ. ಎಸ್ ಎಸ್.ಎಲ್.ಸಿ. ಪರೀಕ್ಷೆಗೆ ಓದುತ್ತಿದ್ದೆ. ನನ್ನನ್ನು ವಿದ್ಯಾವಂತಳನ್ನಾಗಿ ಮಾಡಬೇಕೆಂಬ ಅಪೇಕ್ಷೆ ತಂದೆಯವರಿಗೆ ವಿಶೇಷವಾಗಿತ್ತು. ಅದನ್ನೇ ಮನಸ್ಸಿನಲ್ಲಿಟ್ಟುಕೊಂಡು ನಮ್ಮ ತಾಯಿ ವಿಶೇಷವಾದ ಪ್ರೋತ್ಸಾಹವಿತ್ತು ಓದಿಸುತ್ತಿದ್ದರು. ಈಚೆಗಂತೂ ಅವರಿಗೆ ನನ್ನ ವಿವಾಹಕ್ಕಿಂತ ವಿದ್ಯೆಯೇ ಪ್ರಾಮುಖ್ಯವಾಗಿದ್ದಿತೆನ್ನಬಹುದು.

ಅಂದು ಶನಿವಾರ ಬೆಳಗಿನ ಶಾಲೆ. ಶಾಲೆ ಬಿಡುವುದು ತಡವಾಗಿ ಹನ್ನೊಂದೂವರೆಯಾಗಿ ಹೋಗಿತ್ತು. ಬೀದಿಯಲ್ಲಿ ಜನಗಳೋಡಾಟ ಕಡಿಮೆಯಾಗುತಿತ್ತು. ನಮ್ಮ ಬೀದಿಗೆ ಬರುವ ಹುಡುಗಿಯರ್‍ಯಾರೂ ಇರಲಿಲ್ಲವಾದ್ದರಿಂದ ನಾನೊಬ್ಬಳೇ ಬೇಗಬೇಗ ಬರುತ್ತಿದ್ದೆ. ಅರ್ಧ ದಾರಿಗೆ ಬರುವ ಹೊತ್ತಿಗೆ ಅಡ್ಡ ರಸ್ತೆಯಿಂದ ಯುವಕರೊಬ್ಬರು ನನ್ನ ಕಡೆಗೆ ಬರುವುದು ಕಂಡಿತು. ಕಣ್ಣೆತ್ತಿ ನೋಡಿದೆ. ಪರಿಚಿತರಲ್ಲ ನನ್ನ ಪಾಡಿಗೆ ನಾನು ಮುಂದೆ ಸಾಗುತ್ತಿದ್ದೆ. ಅಷ್ಟರಲ್ಲಿ "ಕಮಲಾಬಾಯಿಯವರ ಮನೆ ಎಲ್ಲಿದೆ?" ಎಂದು ಕೇಳಿದಂತಾಯಿತು. ನನ್ನನ್ನೇ ಪ್ರಶ್ನಿಸಿದರೋ ಅಥವಾ ಮತ್ತೆ ಯಾರಾದರನ್ನೋ ಎಂದು ಸುತ್ತಲೂ ನೋಡಿದೆ ಅವರು ಕೇಳಿದುದು ನನ್ನನ್ನೇ ಎನ್ನುವುದು ಸ್ಪಷ್ಟವಾಯಿತು. 'ಯಾತಕ್ಕೆ?'' ಎಂದೆ.

"ಬೇಕಾಗಿತ್ತು. ಅವರ ಮನೆ ಎಲ್ಲಿದೆ ಎನ್ನುವುದನ್ನು ದಯವಿಟ್ಟು ತಿಳಿಸುವಿರಾ ?''.

"ತಿಳಿಸುವುದೇಕೆ, ಅವರ ಮನೆಯನ್ನೇ ತೋರಿಸುತ್ತೇನೆ. ನೀವು ಕೇಳುತ್ತಿರುವುದು ನಮ್ಮ ತಾಯಿ ನೀವು ಯಾರೆಂದು ಕೇಳಬಹುದೇ ?"

"ನೀವು ಅವರ ಮಗಳೆನ್ನುವುದು ಗೊತ್ತು. ನೀವೂ ನನ್ನನ್ನು ನೋಡಿದ್ದೀರಿ ಮರೆತು ಹೋಗಿರಬಹುದು. ಜ್ಞಾಪಿಸಿಕೊಳ್ಳಿ."

ಜ್ಞಾಪಿಸಿಕೊಳ್ಳುವುದು ಹೇಗೆ? ಅವರ ಮುಖವನ್ನು ದಿಟ್ಟಿಸಿ ನೋಡಬೇಕು. ಅದರಲ್ಲೂ ನಡು ದಾರಿಯಲ್ಲಿ, ಜನರಾರೂ ಇಲ್ಲದಿರುವಾಗ, ಪರಿಚಿತರಲ್ಲದ ಯುವಕರೊಬ್ಬರು ಹತ್ತಿರವಾಗಿ ನಿಂತು ನನ್ನನ್ನೇ ನೋಡುತ್ತಿರುವಾಗ! ಅಬ್ಬಾ! ನನ್ನಿಂದಾಗದ ಕೆಲಸ. ಕಣ್ಣುಗಳು ಮತ್ತಷ್ಟು ನೆಲವನ್ನೇ ನೋಡಲುಪಕ್ರಮಿಸಿದವು ಹೆಚ್ಚು ಹೊತ್ತು ಅಲ್ಲಿ ನಿಲ್ಲುವುದು ಯುಕ್ತವಲ್ಲವೆನಿಸಿತು. ಹರಿದಾಡುತ್ತಿದ್ದ ಮನಸ್ಸನ್ನೆಳೆದು "ಏಕೋ, ನೆನಪು ಹತ್ತಲಿಲ್ಲ; ಬನ್ನಿ, ಮನೆಗೆ ಹೋಗೋಣ. ಮನೆಯೂ ಹತ್ತಿರವೇ ಇದೆ'' ಎಂದೆ. ದಾರಿಯಲ್ಲಿ ಮಾತು ಸಾಗಿತು. ಅವರೇ ಮೊದಲುಮಾಡಿ "ಈಗ ನಾಲ್ಕು ವರ್ಷಗಳ ಹಿಂದೆ ನಮ್ಮ ತಂದೆಯವರೊಂದಿಗೆ ನಿಮ್ಮಲ್ಲಿಗೆ ಬಂದಿದ್ದೆವು. ಆಗ ನಾವು ಬಂದ ಕೆಲಸವಾಗಿದ್ದಿದ್ದರೆ ನೀವು ನನ್ನ ಚಿಕ್ಕಮ್ಮನಾಗಬೇಕಿತ್ತು ಈಗ ನೆನಪು ಮಾಡಿಕೊಳ್ಳಿ. ಹೌದೋ ಅಲ್ಲವೋ?'

ಎಂದರು. ಅದೆಷ್ಟೋ ಧೈರ್ಯಮಾಡಿ ಒಂದು ನಾರಿ ಅವರನ್ನು ನೋಡಿದೆ. ಅದೇ ಮುಖಚರ್ಯೆ. ಸ್ವಲ್ಪ ಮಾರ್ಪಾಟಾಗಿದೆ. ಎಳೆತನ ಪೂರ್ಣವಾಗಿ ಮುಗಿದು ಯೌವನ ರೂಪುಗೊಂಡಿದೆ ಆ ನೋಟ ಹುಡುಗಾಟವಾದರೆ ಈ ನೋಟದಲ್ಲಿ ನೆಳೆತವಿದೆ ಆಸೆ ಇದೆ ನನ್ನ ಮೈ “ಜುಂ” ಎಂದಿತು. ತಲೆಯನ್ನು ಕೀರಾ ತಗ್ಗಿಸಿ, ಬಹು ಮೆಲ್ಲಗೆ ಹೌದು! ಈಗ ನೆನಪಾಯ್ತು!” ಎಂದೆ

ಮನೆಯ ವರೆಗೂ ಇಬ್ಬರೂ ಮಾತನಾಡಲಿಲ್ಲ ಮನೆಗೆ ಬರುತ್ತಲೇ ಅವರನ್ನು ಒಂದು ಕುರ್ಚಿಯ ಮೇಲೆ ಕುಳ್ಳಿರಹೇಳಿ, ಒಳಗಿದ್ದ ತಾಯಿಯವರಿಗೆ ಅವರ ಸೂಕ್ಷ್ಮ ಪರಿಚಯ ಮಾಡಿಕೊಟ್ಟೆ ಅವರು ಹಜಾರಕ್ಕೆ ಬಂದು “ಚೆನ್ನಾಗಿದ್ದೀಯಪ್ಪಾ? ಜ್ಞಾಪಕವಿಟ್ಟುಕೊಂಡು ಬಂದೆಯಲ್ಲಾ! ತಂದೆಯವರು ಆರೋಗ್ಯವಷ್ಟೇ?” ಎಂದರು.

“ಎಲ್ಲರೂ ಆರೋಗ್ಯದಿಂದಿದ್ದೇವಮ್ಮಾ ನೀವು ಮನೆಯನ್ನು ಬದಲಾಯಿಸಿ ಬಿಟ್ಟಿದ್ದೀರಿ. ತಂದೆಯವರು ನಿಮ್ಮನ್ನು ಕಾಣಬೇಕೆಂದಿದ್ದರು. ಅದಕ್ಕಾಗಿ “ಅವರಿರುವ ಸ್ಥಳವನ್ನು ನೋಡಿಕೊಂಡು ಬಾ” ಎಂದರು. ಆದ್ದರಿಂದ........”

“ಮನೆ ಯಾರು ತೋರಿಸಿದರು?„

“ನಾನೇ ಬೀದಿಯವರೆವಿಗೂ ಬಂದಿದ್ದೆ ಆ ವೇಳೆಗೆ ನಿಮ್ಮ ಮಗಳು ಬರುತ್ತಿರುವುದು ಕಾಣಿಸಿತು”

“ಹಾಗಾದರೆ ಅವಳೇ ಕರೆದುಕೊಂಡು ಬಂದಳೋ?” ನಗುನಗುತ ಕೇಳಿದರು ನಮ್ಮ ತಾಯಿ. ಅವರೂ ಬಂದ ನಗುವನ್ನಡಗಿಸಿಕೊಂಡು “ಹೌದು” ಎಂದರು. ನಾನು ಮಾತ್ರ ಮರೆಯಲ್ಲಿ ನಿಂತು ನೋಡುತ್ತಿದ್ದೆ. ಆಗ ಬಂದಾಗ ಎಷ್ಟು ಚೆಲ್ಲುಚೆಲ್ಲಾಗಿ ಆಡಿ ಗಲಾಟೆ ಮಾಡುತ್ತಿದ್ದೆ? ಆ ಎಳೆತನವೆಲ್ಲಿ? ಇಂದಿನ ಸ್ವಯಂಜನಿತ ಗಾಂಭೀರ್ಯವೆಲ್ಲಿ? ಅಂದು ಗಾಂಭೀರ್ಯವು ಸಾಧ್ಯವಿಲ್ಲದ ಮಾತಾದರೆ, ಇಂದು ಚೆಲ್ಲಾಟವು ಮತ್ತೂ ಅಸಾಧ್ಯ. ಅವರಿಗೂ ಅದೆಲ್ಲಾ ನೆನಪಾಗಿರಬಹುದು. ಏನನ್ನೋ ನೆನಸಿಕೊಂಡು “ಅಜ್ಜಿ ಎಲ್ಲಿ? ಕಾಣುವುದೇ ಇಲ್ಲವಲ್ಲಾ” ಎಂದರು.

“ಅವರು ಮಗನಿಗಿಂತ ಮುಂಚೆಯೇ ಕೀರಿ ಕೊಂಡರು. ಕಡೆಗೂ

ಶಾರದೆಯ ಲಗ್ನ ನೋಡುವ ಲಭ್ಯ ಅವರಿಗಿಲ್ಲದೆ ಹೋಯಿತು ”

“ ನಿಜ. ಅವರಿಗೆ ಅಭಿಲಾಷೆ ತುಂಬಾ ಇದ್ದಂತಿತ್ತು. ”

“ ಆ ದಿನ ನಾವೆಲ್ಲರೂ ತಪ್ಪು ತಿಳಿದುಕೊಂಡು ಹಿಗ್ಗಿ ಹೋಗಿದ್ದೆವು ಯಜಮಾನರು ಬಂದು, ನಿಜ ಸಂಗತಿ ತಿಳಿಸುತ್ತಲೇ ತುಂಬಾ ನಿರಾಶೆ ಆಯಿತಪ್ಪ. ನಾವು ತಿರುಗಿ ಅವಳಿಗೆ ವರ ಹುಡುಕುವ ಗೊಡವೆಗೇ ಹೋಗಲಿಲ್ಲ ”

“ ಹಾಗಾಗಿರಬಹುದೆಂದು ಊಹಿಸಿದ್ದೆ. ಅಲ್ಲಿಂದೀಚೆಗೆ ನಮ್ಮ ತಂದೆ ಆ ಪ್ರಯತ್ನವನ್ನೇ ಬಿಟ್ಟು ಬಿಟ್ಟರು. ವಿಶೇಷವಾಗಿ ಮಾತನಾಡುವದನ್ನೇ ಬಿಟ್ಟು ಬಿಟ್ಟು ಏನೋ ಒಂದು ಬಗೆಯ ವೈರಾಗ್ಯದಿಂದ ಇದ್ದ ಹಾಗಿದ್ದರು. ಈಗ ಪುನಃ ಜನಗಳಲ್ಲಿ ಬೆರೆದುಕೊಳ್ಳುತ್ತಿದ್ದಾರೆ. ”

“ ಅಯ್ಯೋ ಪಾಪ! ವಿಪರೀತ ಪೇಚಾಡಿಕೊಂಡು ಬಿಟ್ಟಿದ್ದಾರೆ ಅವರನ್ನು ಖಂಡಿತ ಕರೆದುಕೊಂಡು ಬಾಪ್ಪಾ! ಇಲ್ಲೇ ಊಟಕ್ಕೇಳಪ್ಪಾ ”

“ ಇಲ್ಲಮ್ಮಾ ಊಟವಾಗಿದೆ. ತಂದೆಯವರು ಕೋರ್ಟಿಗೆ ಹೋಗುವ ಹೊತ್ತಿಗೆ ನಮಗೆಲ್ಲಾ ಊಟವಾಗಿಹೋಗುತ್ತದೆ ನಾನು ಹೊರಡುತ್ತೇನೆ ”

‘ಒಳ್ಳೆಯದು’ ಎಂದು ನಮ್ಮ ತಾಯಿ ಬಾಗಿಲಿನ ವರೆಗೂ ಹೋಗಿ ಅವರನ್ನು ಬೀಳ್ಕೊಟ್ಟು ಬಂದರು. ನಾನು ಕಿಟಕಿಯಲ್ಲೇ ನೋಡುತ್ತಿದ್ದು ಅವರು ಅಡ್ಡ ಹಾದಿ ತಿರುಗುತ್ತಲೇ ಹಜಾರಕ್ಕೆ ಬಂದುಬಿಟ್ಟೆ.

o o o o

ಲಗ್ನದ ಮರುದಿನದ ರಾತ್ರಿ. ಆಗ ತಾನೆ ಔಪಾಸನ, ಉರುಟಣೆ ಮುಗಿದಿತ್ತು. ಜನರೆಲ್ಲ ಊಟದ ಸಡಗರದಲ್ಲಿದ್ದರು. ಮಾವನವರು ಮಾತ್ರ ತಲೆಶೂಲೆ ಎಂದು ಚಿಕ್ಕಮನೆಯಲ್ಲಿ ಮಲಗಿದ್ದರು. ಹಿರಿಯರೆಲ್ಲರಿಗೂ ನಮಸ್ಕರಿಸಿದ ಮೇಲೆ ಮಾವನವರಿಂದಲೂ ಆಶೀರ್ವಾದ ಪಡೆದು ಬರಬೇಕೆಂದು ನಾವಿಬ್ಬರೇ ಅವರಿದ್ದೆಡೆಗೆ ಹೋದೆವು. ನಾವು ನಮಸ್ಕರಿಸಿ ಎದ್ದಾಗ ಅವರು ಆಶೀರ್ವಾದ ಮಾಡುತ್ತ “ತಾಯಿ! ನಿನ್ನನ್ನು ಮಗಳೆಂದೇ ಭಾವಿಸಿದ್ದೇನೆ. ಯಾರು ಸೊಸೆಯಾಗಲರ್ಹಳೋ ಅವಳನ್ನು ಸತಿಯಾಗಿಸಲೆಳಸಿದ ತಪ್ಪು ನನ್ನದು. ಆ ದಿನ ನಿಮ್ಮ ತಂದೆಯವರ ಹಿತೋಪದೇಶ ಇಲ್ಲದಿದ್ದರೆ, ಒಬ್ಬ ಪಸುಳೆಯ ಬಾಳನ್ನು ಗೋಳಿಗೀಡುಮಾಡಿಬಿಡುತ್ತಿದ್ದೆ.

ದೇವರು ಧರ್ಮರಕ್ಷಕ. 'ತತ್ಕಾಲದಲ್ಲಿ ಕಹಿಯಾಗಿ ತೋರಿದರೂ ಆ ಮೇಲೆ ಗುಣವಾಗಿಯೇ ತೋರುತ್ತದೆ" ಎಂದರು ನಿಮ್ಮ ತಂದೆ ಅವರು ಈ ಸುಖ ಸಮಯಕ್ಕಿಲ್ಲದಂತಾದುದು ನಮ್ಮ ದುರದೃಷ್ಟ. ಎಲ್ಲಿದ್ದರೂ ಆಶೀರ್ವಾದ ಇದೆ. ಸುಖವಾಗಿ ಬಾಳಮ್ಮಾ ತಾಯಿ! " ಎಂದು ಹರಸಿದರು.

# ತಾಯಿ ಇಲ್ಲದ ತೌರು

" ಚೆನ್ನೀ! ಅದೇನಾ ಇವತ್ತು ಈನೊಂದು ಕುಸೀಮೇಕಿದ್ದಿಯಲ್ಲಾ? ಏಳಬೇಡವಾ ?''

ಗಂಡನಿಗೆ ಬಿಸಿಬಿಸಿ ಮುದ್ದೆಯನ್ನಿಕ್ಕುತ್ತಾ ಇದ್ದ ಚೆನ್ನಿ ನಸುನಾಚಿದವಳಂತೆ ತಲೆಯನ್ನು ಬಗ್ಗಿಸಿಕೊಂಡೇ ಸಾರನ್ನು ತರಲು ಒಳಕ್ಕೆ ಹೋದಳು. ಹೊನ್ನ, ಅಷ್ಟಕ್ಕೇ ಬಿಡದೆ ಮತ್ತೆ ''ಚೆನ್ನೀ!ಚೆನ್ನೀ! ಈವೊತ್ತು ಉಪ್ಪೆಸರುದಕಾನೂವೆ ಬಲ್‌ಸಂದಾಕಿ ಮಾಡಿಬುಟ್ಟಿದ್ದೀಯೇ........ಅದೇನೇಳಾರ ಏಳು ಅಂದರೆ ಏಳಾಕಿಲವಲ್ಲಾ. ನೋಡವಾ ನಿನ್ನಾ ಅಂ?"

ಅವಳು ಹುಸಿನಗೆ ನಗುತ್ತಾ ಸೆರಗು ಸರಿಮಾಡಿಕೊಂಡು '' ಒನ್ಮಾತ ತಡೇ........ಒತ್ತಾರಿಂದ ಏಳ್ಬೇಕುಂತ. "

''ಅದ್ಯಾಕವ್ಮೇ ಈ ಒದ್ದಾಟ? ಏಳ್ಬಡಬೇಡವಾ ಅತ್ತಾಗೇ ?"

'' ಮತ್ತೇ........ಈ ಅಮಾಸೆ ಕಳಿಯೇತ್ಸಲೇ ಬರೋದು ಗೌರೀ ಅಬ್ಬ ಅಲ್ವಾ ? ಅದಕ್ಕೆ......."

'' ಶಿವನೇ! ಓಗತ್ತಾಗೆ, ಒಳ್ಳೇ ತಮಾಸೆ ಆಯಿತಲ್ಲಾ ಇದು. ಅದೇನಂತೇ ಬಯ ನನ್ಕುಂದೆ ? ಏಳೇಳು."

''ಅದಕ್ಕೇ,ಅದಕ್ಕೆ ಈ ಸಾರಿ ಅಬ್ಬಕ್ಕೆ,ಅಣ್ಣನ ಮನೆಗಾರಾ ಓಗಾಣಾ ಅಂತ. ಅವ್ವ ತೀರಿದಮೇಕೆ, ಆ ಚರೀಕೆ ಓಗ್ನಿಲ್ಲವಲ್ಲಾ! ಈಗನಾದರಾ ಓಗಿ ನಾಕ್ದಿನ ಇದ್ದು ಬರಾಣಾ ಅಂತಾ."

ಹೊನ್ನ ಕಿರುನಗೆ ನಗುತ್ತಾ ''ಅದಕ್ಕಿಷ್ಟಾ? ಮಾರಾಯ್ತಿಯಾಗಿ ಓಗ್ಬಿಟ್ಟು ಬಾ. ಆದರೆ ಒನ್ಮಾತು. ಅಬ್ಬಕ್ಕೆ ಬಾ ಅಂದ್ಬುಟ್ಟು ನಿನ್ಯಾರಾದರಾ

ಕರೆಯಾಕೆ ಬಂದವ್ರು? ಇಲ್ಲಾ ಸುದ್ದೀ ಕಳಿಸವ್ರು? ಕರಿವೇಲೆ ಆದೊಗೋ ಗ್ತಿಯಾ?"

ಐಂ!........ಕರೀಬೇಕಾ ನನ್ನಾ ನಮ್ಮಣ್ಣನ ಮನೆಗೆ ನಾ ಓಗಾಕೆ?"

"ಚೆನ್ನೀ! ಅದಕ್ಕೇ ನಾ ಏಳೋದು, ನಿನಗೋಸ್ಕರನಾದರಾ ತಿಳಿಯಾ ಕಿಲ್ಲಾ ಅಂತಾ ಅಣ್ಣ ಏನೋ ನಿಮ್ಮೋನು. ಅತ್ತಿಗೆ ಎಂಗವ್ಳೋ ಏನೋ"

ಐಂ! ಅವೇನ್ಮಾಡಾಳೂ ಬುಡಿ, ನಾ ಓಗಿದ್ದರೆ."

"ವಾಸ್ಯಾತೂ. ಅಬ್ಬ ಮುಗಿಸಿಕೊಂಡು ಒಂದು ವಾರಕೆಲ್ಲಾ ಊರಿಗೆ ಬಂದು ಬುಡು, ತಿಳೀತಾ?"

"ಅದೇನಂಗೇಳೀರೀ? ಅಷ್ಟಜಿನಕೆ ಇಷ್ಟಜಿನಕೆ ಓಗಿ, ಒಂದು ತಿಂಗ ಳಾದರಾ ಇರಬೇಡದಾ? ಇಂಗೋಗಿ ಅಂಗಬಂದರೆ ಏನಂದಾರೂ!"

"ಅಲ್ಲಾ ಕಮ್ಮೀ! ನಿಮ್ಮಪ್ಪ ಬದುಕಿದ್ದಾಗ, ನಿನಗೊಂದು ಶಾಲೆ ತರೋ ಒತ್ತಿಗೇ 'ಈಗ್ಯಾಕವಳಿಗೆ ಶಾಲೀ ಈನೊಂದು ಅಣ ಸುದ್ದಾ? ಅಂದವ್ನೆ. ಅಂತ್ಹೇದು—ನಿಮ್ಮಪ್ಪನೂ ತೀರಿಕೊಂಡ್ಬು. ಕರೀದೆ ಇದ್ರೂ, ನಿನ್ನಟ್ಟಿಕ್ಕೆ ನೀನೇ ಓಗ್ತಾ ಇದ್ದೀಯೇ. ಈಗ, ಅವಳ್ಯಾಕ ಒಂದು ತಿಂಗಳ ಗಂಟ ಮಡೀಕೋ ಬೇಡದು. ನಿನಗೆಲ್ಲೋ ಉಚ್ಚು ಉಚ್ಚು. ಸುಮ್ನೆ ನಾ ಏಳಿದಂತೆ ಕೇಳು. 'ಅಬ್ಬಕೋಗ್ಬ್ಯಾಡ,' ಅನ್ನಾಕಿಲ್ಲ; ಓಗು. ಜಲ್ದಿ ಬಂದ್ಬುಡು. ಅಷ್ಟೆ."

ಚೆನ್ನಿಯ ಮುಖ ಜೋಲು ಬಿತ್ತು. ತನ್ನ ಪ್ರಶ್ನೆಗೆ 'ಹೋಗಿ ಬಾ' ಎನ್ನುವ ಉತ್ತರ ಮೊದಲೇ ತಿಳಿದಿತ್ತು. ಆದರೆ ತಾನು ಬಯಸಿದ್ದಷ್ಟು ದಿವಸ ನಿಲ್ಲಲು ಸಾಧ್ಯವೋ ಇಲ್ಲವೋ, ಎಂದು ಯೋಚಿಸುತ್ತಿದ್ದಳು. ಹೊನ್ನ, ಅವಳ ಮನಸ್ಸಿಗೆ ಮುಳ್ಳು ಚುಚ್ಚುವ ಗೊಡವೆಗೆ ಹೋಗುತ್ತಿರಲಿಲ್ಲ. ಚೆನ್ನಿ ಎಂದರೆ ಅವನ ಕಣ್ಣು. ತನ್ನ ಎಲ್ಲ ಕೆಲಸವನ್ನೂ ಮಾಡಿ ಕೊಂಡು, ಇತರರಿಗೂ ಕೈಯಿಂದಾದಷ್ಟು ಸಹಾಯ ಮಾಡುತ್ತಾ ಚೆನ್ನಿಯೊಡನೆ ಸಂಸಾರ ಮಾಡಿಕೊಂಡಿದ್ದ. ಚೆನ್ನಿ ಅವನಿಗೆ ತಕ್ಕ ಹೆಂಡತಿ. ಅವಳ ಸ್ವಭಾವ ಜನ್ಯವಾದ ಪ್ರೇಮ, ಅನುಸರಣೆ ಆದರ್ಶವೆನಿಸಿತ್ತು. ಕಿರಿಗೂಸೊಂದು ಹುಟ್ಟಿ ಆ ಸಂಸಾರಕ್ಕೆ ಒಪ್ಪವಿಟ್ಟಂತಾಗಿತ್ತು.

ತಂದೆ ಇಲ್ಲದ ಮಗುವನ್ನು ಚೆನ್ನಿಯು ತಾಯಿ ಬಹಳ ಮಮತೆಯಿಂದ

ನಾಕಿ, ನೆರೆಹಳ್ಳಿಗೆ ಲಗ್ನ ಮಾಡಿಕೊಟ್ಟಿದ್ದಳು. ಪ್ರತಿ ಗೌರೀ ಹಬ್ಬಕ್ಕೂ ಮಗಳನ್ನು ಕರೆಸದೆ ಇರುತ್ತಿರಲಿಲ್ಲ. ತಿಂಗಳೋ, ತಿಂಗಳುವರೆಯೋ ಇರಿಸಿಕೊಂಡು ಸೀರೆ, ರವಕೆ, ಕೊಟ್ಟು ಕಳಿಸುತ್ತಿದ್ದಳು. ಆದರೆ, ಮನೆಗೆ ಬಂದಿದ್ದ ಅತ್ತಿಗೆ ? ಸ್ಥೈರಣೆ ಇಲ್ಲದೆ ನಾದಿನಿಯ ವಿಷಯದಲ್ಲಿ ಚುಚ್ಚು ಮಾತುಗಳನ್ನಾಡುತ್ತಲೇ ಇದ್ದಳು. ತಾಯಿಯೂ ತೀರಿದ ಮೇಲೆ ಕೇಳಬೇಕೇ ? ಅತ್ತಿಗೆಯ ಮಾತಿರಲಿ, ಅಣ್ಣನೂ ಸಹ ತಂಗಿಯನ್ನು ವಿಚಾರಿಸುವುದನ್ನು ಬಿಟ್ಟುಬಿಟ್ಟ. ಒಂದೇ ಒಂದು ಹಬ್ಬಕ್ಕೂ ತಪ್ಪದೇ ಹೋಗುತ್ತಿದ್ದ ಚೆನ್ನಿಗೆ ಮೂರು ವರ್ಷಗಳಿಂದ ಗೌರೀ ಹಬ್ಬ ಬಂದರೆ 'ಬಿಮ್ಮೆ'ನ್ನಿತ್ತು. ಈ ಸಲ ತವರೂರಿನ ಬಯಕೆ ಹೆಚ್ಚಾಗಿ ಹೋಗಿ ಗಂಡನಿಂದ ಅಪ್ಪಣೆ ಪಡದುಕೊಂಡಳು.

ಇನ್ನೂ ಹಬ್ಬ ಒಂದು ವಾರವಿದೆ ಎನ್ನುವಾಗಲೇ, ಸಂತೆಗೆ ಬಂದವರ ಕೈಯಲ್ಲಿ ಹೊನ್ನ ಊರಿಗೆ ಸುದ್ದಿ ಕಳಿಸಿ, ಹಬ್ಬಕ್ಕೆ ಮೂರು ದಿನ ಮುಂಚೆಯೇ ಹೆಂಡತಿ ಮತ್ತು ಮಗುವಿನೊಡನೆ ಅತ್ತೆಯ ಮನೆಗೆ ಪ್ರಯಾಣಮಾಡಿದ. ತಂಗಿಯನ್ನೂ ಸೋದರಳಿಯನನ್ನೂ ಕಂಡ ಅಣ್ಣನಿಗೆ ತುಂಬಾ ಸಂತೋಷವಾಯಿತು. ಅತ್ತಿಗೆಯೂ ಸಂತೋಷವನ್ನು ಪ್ರಕಟಿಸಿದಳು ಅಂತೂ ಹಬ್ಬ ಕಳೆಯಿತು. ಬಿಮ್ಮನಸಿಯ ಬಯಕೆಯನ್ನು ಬದಲಾಯಿಸಲಾರದೆ ಹೊನ್ನ, ಚೆನ್ನಿಯನ್ನೂ ಮತ್ತು ಮಗುವನ್ನೂ ಅಲ್ಲಿಯೇ ಬಿಟ್ಟು ತಾನೊಬ್ಬನೇ ಹಿಂತಿರುಗಿದ. ಅತ್ತಿಗೆಯೂ ಸಹ ಭಾಯುಪಚಾರಕ್ಕಾಗಿ "ಚೆನ್ನೀ! ಗಂಡನೊಂದಿಗೆ ಒಂಟೋಗಬ್ಯಾಡಾ. ಸಂತೇ ಜಿನ ಗಾಡೀಲಿ ಕಳಗಸ್ತೀನಿ. ಅಷ್ಟಗಂಟ ಇಲ್ಲೇ ಇರವ್ವಿ" ಎಂದಳು. ಪಾಪ! ತಿಂಗಳೋ, ತಿಂಗಳೂವರೆಯೋ ನಿಲ್ಲಬೇಕೆಂದಿರುವಳೆಂಬುದು ಅವಳಿಗೇನು ಗೊತ್ತು ? ಅತ್ತಿಗೆಯ ಇಂಗಿತವನ್ನರಿಯದ ಚೆನ್ನಿ "ಅದಕೇನತ್ತಿಗೇ ! ನಾ ಬಂದಿರೋದಾರಾ ಯಾಕೆ ? ಒಂದು ತಿಂಗಳಾರ ಇವಾಣಾ ಅಂತ. ಮೂರೊರ್ಸಕ್ಕೀಗ ಬಂದಿವ್ನೀ. ನಾನ್ಯಾಕೋಗಲೀ ಇಷ್ಟು ಜಲ್ದಿ!"ಎಂದಳು. ಇನ್ನೂ ಒಂದು ತಿಂಗಳು ! ಅಬ್ಬಾ ! ಅತ್ತಿಗೆಯ ಮೈ ಬೆವರಿ ಎದೆ ಡವಗುಟ್ಟಿತು. 'ನಾನ್ಯಾಕ ಒಂದು ತಿಂಗಳು ಮಡಿಕೋಬೇಡದು ?' ಎಂದುಕೊಂಡು ಬಾಯಿಯಲ್ಲಿ ಮಾತ್ರ "ಇರು, ನಮ್ಮವ್ವಾ, ಇರು. ನಿನ್ನ

ಬ್ಯಾಡಾ ಅಂದಿದ್ನಾ ನಾನು? ನಿನ್ನಟ್ಟಿ ಅದೆ, ನಿನ್ಯಾಕಲದೆ, ಅಣ್ಣ ನಿನ್ಮೋನು; ನಾನ್ಯಾರು ಬ್ಯಾಡಾ ಅನ್ನಾಕೆ?' ಎಂದಳು.

ಒಂದು ವಾರವೆನ್ನುವದರಲ್ಲಿ ಅತ್ತಿಗೆಯ ಅಲಕ್ಷ್ಯವು ಚೆನ್ನಿಗೂ ತಿಳಿಯಿತು. ರಾಗಿ ಬೀಸುತ್ತಿದ್ದಾಗ ಅತ್ತಿಗೆಯೇ "ಚೆನ್ನೀ! ನಾಳೆ ಪೊತ್ತಾರೆ ಗಾಡಿ ಕಟ್ಟಿಸೋಣವೋ? ಚಂಜೆ ಗಾಡಿಗೋಯ್ತೀಯೋ?" ಎಂದಳು. ಅಸಮಾಧಾನದ ಧ್ವನಿಯಲ್ಲಿ ಚೆನ್ನಿ "ಯಾವುದಾದರೂ ಸರಿ ಕಾಣತ್ತಿಗೆ" ಎಂದುಬಿಟ್ಟಳು. ಮಧ್ಯಾಹ್ನ ಊಟಮಾಡುತ್ತಿದ್ದಾಗ ಚೆನ್ನಿ ಅಣ್ಣನೊಡನೆ "ಅಣ್ಣಾ! ನಾನೂ ಬಂದು ಒಂದು ವಾರ ಆಯ್ತಲ್ಲಾ. ನಾಳಿಕೆ ಊರಿಗೋಗ್ಬಿಟ್ಟು ಬತ್ತೀನಿ. ಪಸಿಪೊತ್ತಿನಂತೆ ಗಾಡೀ ಕಟ್ಟಿಸ್ಬುಡು" ಎಂದಳು. ಅಣ್ಣನಿಗೆ ಆಶ್ಚರ್ಯವಾಯಿತು. "ಕಂಡೋರ ಮನೆಗೆ ಬಂದಿದ್ದೀಯಾಮ್ಮಿ! ಒಯ್ತೀನಿ ಒಯ್ತೀನಿ ಅಂತಿಯೇ. ಇರು ಸುಮ್ಕೆ ಇನ್ನೊಂದು ತಿಂಗಳಾರ" ಎಂದು ಬಿಟ್ಟ. ಯಾರಿಗೂ ಮರು ಮಾತಾಡುವ ಧೈರ್ಯ ಬರಲಿಲ್ಲ. ಅತ್ತಿಗೆಗೆ ಮಾತ್ರ ಹೊಟ್ಟೆಯಲ್ಲಿ ಬೆಂಕಿ ಬಿತ್ತು. ತನ್ನ ಗಂಡ ತಂಗಿಯ ಪರವಹಿಸಿ ಮಾತನಾಡಿದ್ದು ಅವಳಿಗೆ ಉರಿಯ ಮೇಲೆ ತುಪ್ಪ ಸುರಿದಂತಾಯಿತು.

ಮರುದಿನದಿಂದಲೇ ಚೆನ್ನಿಗೆ ಕೂಲಿಯವಳ ದುಡಿತ. ಬೆಳಗಿನಿಂದ ಬೈಗಿನ ವರೆಗೂ ದುಡಿದೂ ದುಡಿದೂ ಅವಳ ದುಂಡು ಕೆನ್ನೆಗಳು ಬಾಡಿದವು. ಮುಗುವೂ ಕಂಗೆಟ್ಟಿತು. ಆದರೂ ಅತ್ತಿಗೆಯು ಸಿಡಿಸಿಡಿ ಎನ್ನುವದನ್ನು ಬಿಡುತ್ತಿರಲಿಲ್ಲ. ಗಂಡ ಮನೆಯಲ್ಲಿದ್ದಾಗ ಮಾತ್ರ ಬೇಳುವೆಯ ಮಾತುಗಳನ್ನಾಡಿ ನಿಸ್ಪೃಹಳೆನಿಸಿಕೊಳ್ಳುತ್ತಿದ್ದಳು. ಅಣ್ಣನ ಮುಂದೆ ಚಾಡಿ ಹೇಳಿದರೆ ನಂಬುವುದಕ್ಕಾಗುವಂತಿರಲಿಲ್ಲ. ಚೆನ್ನಿಯೂ ಅಷ್ಟರವಳಲ್ಲ. ಕಷ್ಟ ಸಹಿಸುತ್ತಿದ್ದಳೇ ಹೊರತು ಚಾಡಿ ಹೇಳುವ ಗೊಡವೆಗೆ ಹೋಗುತ್ತಿರಲಿಲ್ಲ. ಊರಿಗಾದರೂ ಹೊರಟು ಹೋಗೋಣಾ ಎಂದರೆ, ಅಣ್ಣನೇ ನನ್ನುವನೋ? ಬಿಸಿ ತುಪ್ಪ ಬಾಯಲ್ಲಿ ಹಾಕಿಕೊಂಡ ಹಾಗಿತ್ತು.

ಎಷ್ಟೆಷ್ಟು ಹಿಂಸಿಸಿದರೂ ನಾದಿನಿಯು ಗಂಟು ಮೂಟೆ ಕಟ್ಟದಿರುವುದು ಅತ್ತಿಗೆಯನ್ನು ರೋಷಕ್ಕೆಬ್ಬಿಸಿತು. ತನ್ನ ತಂಗಿಯ ಮದುವೆಗಾಗಿ ಹೋಗಬೇಕಾಗಿದ್ದುದರಿಂದ ತಾನಿಲ್ಲದ ಸಮಯದಲ್ಲಿ ಅವರೆಲ್ಲಾ ಇಲ್ಲಿ ತಿಂದು ತೇಗುವರಲ್ಲಾ ಎಂದು ಯೋಚಿಸಿ ಕಡೆಗೊಂದು ನಿರ್ಧಾರಕ್ಕೆ ಬಂದಳು.

ಆಗ ತಾನೇ ಸಂಜೆಯು ಸರಿದು ರಾತ್ರಿಗೆ ಎಡೆಗೊಡುತ್ತಲಿತ್ತು. ಹಳ್ಳಿಯ ಮನೆಗಳಲ್ಲೆಲ್ಲಾ ಹರಳೆಣ್ಣೆಯ ಹಣತೆಗಳು ಮಿನುಗುತ್ತಲಿದ್ದವು. ನೀರಿಗೆ ಹೋಗಿದ್ದ ಅತ್ತಿಗೆಯು ಕತ್ತಲಾದರೂ ಮನೆಗೆ ಬರಲಿಲ್ಲವಲ್ಲಾ ಎಂದು ಚೆನ್ನಿಯು ನಿರೀಕ್ಷಿಸುತ್ತಿದ್ದಳು. ಕೆರೆಯ ಬಳಿ ಹೋಗಿ ನೋಡೋಣ ವೆಂದರೆ, ಆಗ ತಾನೆ ಮಗುವು ಮಲಗುತ್ತಲಿತ್ತು. ಹೊಲದಿಂದ ಅಣ್ಣನೂ ಬಂದ. ಮನೆಯಲ್ಲಿ ಇರಲಿಲ್ಲ! "ಅವೆತ್ತಾಗೋದ್ಲಪ್ಪಾ? ಮುಚ್ಚಂಜೆ ಪೊತ್ತಾಗದಲ್ಲಾ" ಎಂದ. "ಕೆರೆಗೋಗವ್ಳೆ ಕಣಣ್ಣಾ. ಇನ್ನೇನು ಬರ ಬೇದು" ಎಂದಳು ಚೆನ್ನಿ.

ಹೊತ್ತು ಮೀರಿ ಕತ್ತಲಾದರೂ ಅತ್ತಿಗೆಯು ಮನೆಗೆ ಬರಲಿಲ್ಲ. ಚೆನ್ನಿಯೂ ಚಡಪಡಿಸಿದಳು. ಅಣ್ಣನೂ ಕೆರೆಯ ಬಳಿ ಹೋಗಿ ನೋಡೋ ಣವೆಂದಿರುವಷ್ಟರಲ್ಲಿ, ಕೆರೆ ಬೀದಿ ಕೆಂಪಕ್ಕ ಓಡಿಬಂದು " ಚಿಕ್ಕೋನೇ! ಚಿಕ್ಕೋನೇ! ಬರ್ರೀನೆ ಬಾ. ನಿನ್ನೆಡತೀನ ಗಾಳಿ ಮೆಟ್ಟಿಗೊಂಡಿದೆ. ಕೆರೆಗೆ ದಬ್ಬಿಟ್ಟಾತೂ. ಓಡಿಬಾ! ಓಡಿಬಾ!! " ಎಂದಳು ಏಳುವುದನ್ನೂ ಬೀಳುವು ದನ್ನೂ ಕಾಣದೆ, ಅಣ್ಣನು ಕೆರೆಯ ದಂಡೆಯ ಕಡೆಗೆ ಸಾಗಿದನು. ಕೆಂಪಕ್ಕ ಒಂದು ರಟ್ಟೆ, ಗಂಡ ಒಂದು ರಟ್ಟೆ ಹಿಡಿದುಕೊಂಡು, ತಲೆ ತಲೆ ಚಚ್ಚಿ ಕೊಳ್ಳುತ್ತಾ ತೂರಾಡುತ್ತಾ ಕುಳಿತಿದ್ದ ಅತ್ತಿಗೆಯನ್ನು ಮನೆಗೆ ಕರತಂದರು. ಒಳಬಾಗಿಲಲ್ಲಿ ಕಾಲಿಡುವುದೇ ತಡ ಅವಳನ್ನು ಹಿಡಿದಿದ್ದ ದೆವ್ವ, "ಹೂಂ! ತಡಕದ್ದು ಸಿಕ್ಕದೇ! ಸಿಕ್ಕದೇ! ಏಡು ಜೀವದೋಳವಳೇ ಈ ಮನೆಲೀ. ಇವಳೇನ್ಮಾಡಾಕೆ? ಹೂಂ! ಬುಟ್ಟೇನಾಂ, ನಾ ಬುಟ್ಟೇನಾ, ಹೂಂ! ಹಾಂ!! ಮುರೀದೇ ಬುಡಾಕಿಲ್ಲಾ ಕಣ್ಲೇ! " ಎಂದು ಚೀತ್ಕರಿಸಿತು. ಚೆನ್ನಿ ನಡುಗಿದಳು. ಅತ್ತಿಗೆಯ ಚರ್ಯೆಯನ್ನು ನಂಬಲಾರದವಳಾದರೂ ದೆವ್ವಗಳ ಮೇಲಿನ ನಂಬಿಕೆಯು ಚೆನ್ನಿಯನ್ನು ಹೆದರಿಸಿತು. ಆ ಹೊತ್ತಿಗೆ, ಅಣ್ಣನೂ ಬಂದು " ಚಿಕ್ಕೋಳೇ! ನೀ ಬಂದೊತ್ತು ಯಾಕೋ ಸರಿಯಾ ಗ್ನಿಲ್ಲ. ಇಬ್ಬರಿಗೂ ಬಂದದೆ ಗಾಚಾರಾ. ಇನ್ನೇನಾಯ್ತುದೋ ಕಾಣೇ. ಅದಕ್ಕ ಸಲುವಾಗಿ, ಪೊತ್ತನಂತೆ ಗಾಡೀ ಕಟ್ಟಿಸ್ತೀನಿ. ಕುಂತುಕೊಂಡು ಓಗಿ ನಿನ್ನ ಮನೇ ನೀ ಸೇರಿಕೋ. ಅವಳ ಮೇಲೆ ಬಂದಿರೋದೇನೂ ಸಾಮಾನಾದ್ದಲ್ಲ. ನೋಡಿಕೋ, ಅದರ ಕಣ್ಣೆಲ್ಲಾ ನಿನ್ನ ಮೇಕೇ ಅದೆ.

ನಿನ್ನ ಮಗೀನ ಕರಕೊಂಡು ನೀ ಒಂಟೋಗವ್ವಾ! " ಎಂದನು. ಚೆನ್ನಿಗೂ ಅಷ್ಟೇ ಬೇಕಾಗಿತ್ತು. ಒಪ್ಪಿಕೊಂಡಳು

ಅತ್ತಿಗೆಗೆ ಬೇಕಾದಷ್ಟು ಉಪಚಾರಗಳೂ, ಯಂತ್ರಮಂತ್ರಗಳೂ ಆದವು. ಏನು ಮಾಡಿದರೂ ಪ್ರಯೋಜನವಾಗಲಿಲ್ಲ. ಚೆನ್ನಿಯ ಗಾಡಿ ಊರು ದಾಟಿತು. ಅತ್ತಿಗೆಯ ಗಾಳಿ ಕೆರೆ ಸೇರಿತು.

ಂ ಂ ಂ ಂ

ಬಿತ್ತನೆಯ ಕೆಲಸವೆಲ್ಲ ಮುಗಿದು, ಪೈರುಗಳು ಮೇಲೆದ್ದಿತೆಂದರೆ ರೈತರಿಗೆಲ್ಲಾ ಸ್ವಲ್ಪ ಬಿಡುವಿದ್ದಂತೆ. ಈ ಬಿಡುವಿನ ಕಾಲವನ್ನು ಹೇಗೆ ಸದುಪಯೋಗ ಪಡಿಸಬೇಕೆಂದು, ಹಾಲುಹಳ್ಳಿಯ ರೈತ ಯುವಕರೆಲ್ಲಾ ಯೋಚಿಸಿ, ಕಡೆಗೆ ಒಂದು ಉತ್ತಮವಾದ ಬೈಲಾಟವನ್ನಾಡಬೇಕೆಂದೂ, ಅದರಿಂದ ತಮಗೆ ಅಲ್ಲದೆ, ಸುತ್ತು ಹಳ್ಳಿಯ ಜನರ ಮನಸ್ಸಿಗೆಲ್ಲ ಉಲ್ಲಾಸ ವಾಗುವುದೆಂದೂ ನಿರ್ಧರಿಸಿದರು.

ಅಂದಿನ ಆಟ ದಕ್ಷಯಜ್ಞ. ಹೊನ್ನನೇ ಮುಖ್ಯ ಪಾತ್ರಧಾರಿ ಬೈಲಿನಲ್ಲಿ ಜನ ಕಿಕ್ಕಿರಿದಿತ್ತು. ಆಟ ಸಾಗಿತ್ತು. ಆ ಹೊತ್ತಿಗೆ ಸರಿಯಾಗಿ ಚೆನ್ನಿಯ ಗಾಡಿಯೂ ಹಳ್ಳಿಗೆ ಬಂದಿತು ಹೊನ್ನ ಆಟಕ್ಕೆ ಬಂದುಬಿಟ್ಟಿದ್ದ. ಆದ್ದರಿಂದ ಚೆನ್ನಿಯೂ ನಿರ್ವಾಹವಿಲ್ಲದೆ, ಆಟದ ಬೈಲಿಗೇ ಬರಬೇಕಾಯಿತು. ಅವಳು ಬರುವ ಹೊತ್ತಿಗೆ ಆಟ ಸುರುವಾಗಿ ದಾಕ್ಷಾಯಣಿಯು, ತಂದೆಯು ಮಾಡುತ್ತಿರುವ ಯಜ್ಞಕ್ಕೆ ಹೋಗಬೇಕೆಂದು ಹಟ ಹಿಡಿದು " ಆಹ್ವಾನವಿಲ್ಲದೇ ಹೋಗುವುದು ಅಪಮಾನಕರ" ವೆಂದು ಪರಶಿವನು ಪಾರ್ವತಿಗೆ ಪರಿಪರಿಯಾಗಿ ಬೋಧಿಸಿದರೂ ಕೇಳದೆ, ತಂದೆಯ ಮನೆಗೆ ಹೊರಟುಹೋಗುವಳು ಅಲ್ಲಿ ಆಡುವ ಪ್ರತಿ ಮಾತೂ ಚೆನ್ನಿಯನ್ನು ಅಣಕಿಸುವಂತಿದ್ದಿತು. ಅಪಾರ ವೇದನೆಯಾಗಿ ಕಣ್ಣೀರಿಟ್ಟಳು. ಆಟ ಮುಂದೆ ಸಾಗಿ, ದಕ್ಷಬ್ರಹ್ಮನು ಬಂದ ಮಗಳನ್ನು ಲಕ್ಷಿಸದೆ ಹೋಗಲು, ಅಪಮಾನವನ್ನು ಸಹಿಸಲಾರದೆ, ಯಜ್ಞಕುಂಡದಲ್ಲಿ ಬೀಳುವದು ಮುಂತಾಗಿ, ಬೆಳ್ಳಿ ಮೂಡುವ ಹೊತ್ತಿಗೆ ಆಟದ ಮಂಗಳವಾಯಿತು. ಚೆನ್ನಿಯೂ ಮನೆಗೆ ಬಂದಳು. ಇನ್ನೂ ದೂರದಲ್ಲಿರುವಾಗಲೇ ಹೊನ್ನನಿಗೆ ತನ್ನ ಮನೆಯ ಬಾಗಿಲಲ್ಲಿ ಗಾಡಿ ನಿಂತಿರುವುದು ಕಾಣಬಂತು. ಆತುರದಿಂದ

ಮನೆಗೆ ಬಂದರೆ, ಒಳಗೆ ತನ್ನ ಚೆನ್ನಿ ಮತ್ತು ಮಗು! ಆಶ್ಚರ್ಯವಾಯಿತು. ಮಗುವನ್ನೆತ್ತಿ ಮುದ್ದಿಟ್ಟು, “ ಯಾರ ಸಂಗಾಟ ಬಂದೆವ್ವಿ? ಸುದ್ದೀ ಕಳಸಾಕಿಲ್ಲಾ ಬತ್ತೀವಿ ಅಂತ? ಗಾಡೀ ತಕ್ಕೊಂಡ ಬರ್ತಿದ್ದನಲ್ಲಾ! ಓಗ್ಲಿ, ನೀವೇಟೋತ್ತಿಗೆ ಬಂದ್ರಿ? ಆಟದ ತಾಪ್ಪೂ ಬಂದಿದ್ದೋ? ” ಎಂದ. ತಕ್ಷಣ ಉತ್ತರ ಕೊಡಲು ಚೆನ್ನಿಯಿಂದಾಗಲಿಲ್ಲ. ಕಣ್ಣೀರು ತುಂಬಿ ಗಂಟಲು ಬಿಗಿದಿತ್ತು. ತಲೆಯನ್ನು ತಗ್ಗಿಸಿದ್ದಳು. ಅವನಿಗೆ ಆದರಿಂದ ಆಶ್ಚರ್ಯವಾಗಿ, ಕೇಳಿದ. “ಇದ್ಯಾಕ ಚೆನ್ನೀ? ಇಂಗಳ್ತಿಯೇ? ಅದೇನು, ಚಮಾಚಾರನಾರಾ ಏಳು. ಊರಲೆಲ್ಲಾ ಸಂದಾಕವರೆ ತಾನೇ? ”. ಅಳುತ್ತಲೇ ಉತ್ತರ ವಿತ್ತಳು ಚೆನ್ನಿ. “ ಎಲ್ಲರೂ ನೆಮ್ಮದ್ಯಾಗೇ ಅವರೆ. ಅದಕಲ್ಲಾ. ಅತ್ತಿಗೆಮ್ಮನ ಗಾಳಿ ಮೆಟ್ಟಿಕೊಂಡು ‘ ಈ ಮನೇಲಿ ಏಡು ಜೀವದೋಳವಳೆ ಅವಳನ್ನ ಮುರುಕೋತೀನಿ ” ಅಂತು. ಅದಕೆ ಅಣ್ಣಾ ಇದ್ದೋನು “ ನೀ ಒಂಟೋಗು ” ಅಂದ. ಒಬ್ಬಳೇ ಒಂಟಬಂದಿ ” ಅಂದಳು. “ ಒಳ್ಳೇ ಕೆಲ್ಸ ಮಾಡ್ದಿ, ನಾತ್ರಿಂದ ಅಸುಕೊಂಡೇ ಇದ್ದೀರಿ ತಾನೇ? ಮೊದ್ಲೋಗಿ ಮಗೀಗೇನಾದರಾ ಮಾಡಿಕ್ಕು; ನೀನು ಉಣ್ಣು ” ಎಂದು ಹೊನ್ನನೂ ಒಳಗೆ ಹೋಗಿ “ ಆಟ ಎಂಗಿತ್ತವ್ವೀ? ಕತೆನಾರಾ ತಿಳೀತ ನಿನಗೆ? ” ಎನ್ನಲು, ಕ್ಷಮಾಯಾಚನೆಯ ದೃಷ್ಟಿಯನ್ನು ಬೀರುತ್ತಾ ಅತ್ಯಂತ ವಿನಯದಿಂದ ಚೆನ್ನಿ “ನನ್ನ ಕಂಡೇ ಆಟ ಕಟ್ಟಿದಂಗಿತ್ತು ಬುಡಿ. ನಿಮ್ಮ ಮಾತು ಕೇಳ್ದಲೆ ಓದೆ. ಅದಕ್ಕೆ ಶಿವಾ ನನಗಿಂಗ ಮಾಡ್ದ. ನನ್ನದು ತೆಪ್ಪಾಯಿತು. ದಾಕ್ಸಾಯಿನಿ ಮಾನಿಟ್ಟಿ. ಬೆಂಕಿ ಆರಕೊಂಡ್ಲು ” ಎಂದಳು. “ ಅದಕ್ಕೆ ನೀನೂ ಬೆಂಕಿ ಆರಕೊಳ್ಳೋಣಾ ಅಂತ್ಲಾ? ಉಚ್ಚೀ. ಉಚ್ಚೀ. ಉಚ್ಚೀ ಓಗತ್ತಾಗೆ. ನಾ ಮುದಲೇ ಏಳಿರ್ನಿಲ್ಲವಾ? ಕರೀದೆಲೆ ಓಗ್ಯ್ಬಾಡಾ. ನಿಮ್ಮತ್ತಿಗೆ ಚಾಳೀ ಇಂಗದೇ ಅಂತಾವ. ಕೇಳ್ದಲೆ ಓದೆ. ಅನಬೇಯಿಸಿದೆ. ಓಗ್ಲಿ ಬುಡು, ಆಗೋದ ಮಾತಿಗೆ ಅತ್ತರೇನು ಬತ್ತದೆ? ದೆನ್ನಟ್ಟ, ನಿನ್ನಾಬ ಕಲೂ ಉಳ್ಕೊಂಡು ಸುಮ್ಕಿರು. ಅಲ್ಲಿಗಿಲ್ಲಿಗ್ಯಾಕೋಯ್ತಿಯೋ? ಗಾದೀ ಮಾತು ಕೇಳಿಲ್ಲವಾ ನೀನು! “ ತಾಯಿ ಇರುಗುಂಟಾನೇ ತೌರು ” ಅಂತವಾ? ” ಎಂದ!

# ತೇರಿನ ಶಾಲು

" ಶಾರದಮ್ಮಾ, ಏನನ್ನೂ ಹೇಳಲೇ ಇಲ್ಲವಲ್ಲಾ. "

" ಹುಶ್, ಈಗ ಬೇಡ ಆ ಮೇಲೆ,ಹೊಳೆಗೆ ಹೋದಾಗ ಮಾತನಾಡೋಣ. ಬಟ್ಟೆನೆಲ್ಲಾ ಬುಟ್ಟಿಗೆ ಹಾಕ್ಕೊಂಡು ಬರ್ತೇನೆ. ನೀನು ಹೋಗ್ತಾ ಇರು. "

" ಬೇಗ ಬಾಮ್ಮ ಹಾಗಾದರೆ, ಮುತ್ಸಂಜೆಯಾಗುತ್ತೆ "

ಮೂರು ವರ್ಷಗಳಿಂದಲೂ ತೇರಿಗೆ ಹೋಗಬೇಕೆಂಬ ಹೆಬ್ಬಯಕೆ. ಹೆಂಗಸರ ಬಯಕೆ ಬಡಪೆಟ್ಟಿಗೆ ಬಗೆ ಹರಿಯುತ್ತಿದೆಯೇ ? ಒಂದು ವರ್ಷ ಒಬ್ಬಳು ಗರ್ಭಿಣಿಯಾದರೆ, ಮತ್ತೊಂದು ವರ್ಷ ಇನ್ನೊಬ್ಬಳು ಬಾಣಂತಿ. ಹಳ್ಳಿಗಾಡು ಒಗ್ಗಟ್ಟು ಹೆಚ್ಚು. ಒಬ್ಬರು ಇನ್ನೊಬ್ಬರನ್ನು ಬಿಟ್ಟು ಯಾವ ಕೆಲಸಮಾಡಲೂ ಮನಸ್ಸಿಗೆ ಹೊಂದುವದಿಲ್ಲ. ಹೀಗಾಗಿ ಅವಕಾಶವೇ ಲಭಿಸಿರಲಿಲ್ಲ. ಈ ಸಾರಿ ಮಾತ್ರ ಎಲ್ಲರಿಗೂ ಬಿಡುವು ಈ ಅವಕಾಶವನ್ನ ಕಳೆದುಕೊಳ್ಳಬಾರದು. ಹೋಗಿಯೇ ಬಿಡಬೇಕೆಂದು ನಿರ್ಧರಿಸಿಬಿಟ್ಟೆವು ಯಜಮಾನರನ್ನು ಕೇಳಿ, ತೇರಿನ ಖರ್ಚಿಗೆಂದು ಹಣ ವಸೂಲು ಮಾಡಿದ್ದೆವು. ಅದೂ ಸಾಲದೆಂದು, ಅವರಿಗೆ ತಿಳಿಯದಂತೆ ಪುಡಿಕಾಸುಗಳ ಪುಟ್ಟಗಂಟನ್ನು ಬೇರೆ ಕಟ್ಟಿಕೊಂಡಿದ್ದೆವು. ಆದರೆ ವೆಂಕು ಜೋಯಿಸರ ನಾದಿನಿ ಒಬ್ಬಳ ಕೈ ಮಾತ್ರ ಬರಿದು, ಹದಿನೈದು ವರ್ಷ ತುಂಬುವದರೊಳಗೇ ಕಾಸು ಕೊಡುವ ಧಣಿಯನ್ನು ಕಳೆದುಕೊಂಡು, ಕಂಡವರ ಅನ್ನಕ್ಕೆ ಕೈ ಚಾಚಿದ್ದಳು. ಆಶೆ ಹಿರಿದು. ಕಣ್ಣಲ್ಲಿ ನೀರಿಟ್ಟು, ನನ್ನ ಬಳಿ ತನ್ನಾಸೆಯನ್ನು ಹೇಳಿಕೊಂಡಳು. ಎದೆ ಕರಗಿ, 'ವೆಂಕೂ, ಇದಕ್ಯಾತಕ್ಕಮ್ಮಾಯೋಚನೆ. ನಿನ್ನ ದಾನ ಧರ್ಮಕ್ಕೇನು ಬೇಕೋ ಅದನ್ನು ನಾನು ಕೊಡುತ್ತೇನೆ. ಯಾರಿಗೂ ತಿಳಿಸೋಲ್ಲ. ಹೇಗಿದ್ದರದೂ ಕಾಲ್ನಡಿಗೆಯ ಪ್ರಯಾಣ. ಮನೆಯಲ್ಲಿ ಕೇಳಿಬಿಟ್ಟು ನೀನೂ ಬಂದುಬಿಡು." ಎಂದೆ ಅವಳ ಸಂತೋಷಕ್ಕೆ ಪಾರವಿಲ್ಲ.

ಹೊಳೆಗಿಳಿದು ಕೊಳದಪ್ಪಲೆಯನ್ನು ತೊಳೆಯುತ್ತಾ ಕಮಲಮ್ಮನವರು " ಶಾರದಮ್ಮಾ ! ಏನಂತಾರೆ ನಿಮ್ಮಜ್ಜಿ? " ಎಂದರು.

ಶಾರದಮ್ಮನವರು “ ಅಯ್ಯೋ, ನಿಮಗೆ ಭ್ರಾಂತು. ಅವರು ಬರದೇ ಇರ್‍ತಾರೆಯೇ ಅಂದ್ರೆ ! ” ಎಂದು ರಾಗ ಎಳೆದರು.

ನಾನು “ ನಾನು ಎಷ್ಟೆಷ್ಟೋ ಹೇಳಿದೆ ಕಣ್ರೇ! “ ಮಳೆ ಛಳಿ ನಿನಗೆ ತಡೆಯೋದಿಲ್ಲಜ್ಜೀ ! ವಯಸ್ಸಾಯಿತು. ಏಳು ಮೈಲಿ ನಡೆಯೋಣಾ ಅಂದ ರೇನು ! ” ಎಂದಿದ್ದಕ್ಕೆ, “ ಹ್ಯಾಗೋ ಆ ಸ್ವಾಮೀನೇ ಕರ್‍ಕೊಂಡು ಹೋಗ್ತಾನೇಳೆ. ಕೈಲಾಗದ ಮುದುಕಿ, ನನ್ನ ಸೇವೆಗೆ ಬರ್‍ತಾ ಇದೆ ಅನ್ನೋದು ಅವನಿಗೆ ಗೊತ್ತಿಲ್ವೇ ? ’’ ಎಂದುಬಿಟ್ಟಳಮ್ಮಾ. ಸುಬ್ಬಕ್ಕನೂ ನಾನೂ ಹೇಳಿದ್ದೆಲ್ಲಾ ಕೇಳಿದ್ದಾರೆ. ಕೇಳಿ ಬೇಕಾದರೆ ’’ ಎಂದೆ.

ಸುಬ್ಬಕ್ಕ ಬಾಯಿಹಾಕಿ ‘ಹೌದು’ ಹೌದು. ಅಲ್ಲೆಲ್ಲಾ ತಣ್ಣೀರು ಮುಳುಗ ಬೇಕಾಗುತ್ತಲ್ಲಜ್ಜಮ್ಮಾ ! ನಿಮ್ಮ ಮಡಿ ಮೈಲಿಗೆಗೆ ಬೇರೆ ಒದ್ದಾಟವಾಗುತ್ತೆ, ಏನ್ಮಾಡ್ತೀರಿ ?’ ಎಂದೆ. ಅದಕ್ಕೆ ‘ದಿನಾಗಲೂ ಬಿಸಿನೀರು ಕಾಯಿಸಿ ಹುಯಿಕೋತಿದೀನಿ ಅಂದುಕೊಂಡೆಯಾಮ್ಮಾ? ದೇವರ ಪಾದೋದಕ ಸ್ನಾನ ಮಾಡಿದರೆ ಇದ್ದ ರೋಗವೆಲ್ಲಾ ಗುಣವಾಗುತ್ತೆ. ಹಾಗೆಲ್ಲಾ ಅನ್ನಬಾರದೂ, ‘ಬಿಡ್ತು’ ಅನ್ನು ಅಂದ್ರೂ ಕಣ್ರೇ ! ’ ಎಂದರು.

“ ಮಡಿ ಮೈಲಿಗೇಗೇ ಏನಂದ್ರೂ ?”

“ ದೇವರ ಸಾನ್ನಿಧ್ಯದಲ್ಲಿ ಮಡಿ ಅಂದರೇನೂ ಮೈಲಿಗೆ ಅಂದ್ರೇನೂ, ಪಾಪ ಅಂದ್ರೇನೂ ಪುಣ್ಯ ಅಂದ್ರೇನೂ, ಅವನ್ನೆಲ್ಲಾ ಮರೆತು ಬಿಡಬೇಕು ಕಾಣೆ. ಆಗಲೀಗ ದೇವರು ಮೆಚ್ಚುಕೊಳ್ಳತಾನೆ. ಹಾಗಿಲ್ಲದೆ “ ಗಂಗೇಲಿ ಸ್ನಾನ, ತಂಬಿಗೆ ಮೇಲೆ ಜ್ಞಾನ ” ಆದರೆ ಏನು ಸಾರ್ಥಕ ಹೇಳು” ಅಂತಾ ನನಗೇ ತಗಲಿಕೊಂಡು ಬಿಟ್ಟರು. ಏತಕ್ಕಾದರೂ ಆ ಮಾತೆತ್ತಿದೆನೋ, ಎಂದುಕೊಂಡು ಮನೆಗೆ ಹೊರಟು ಹೋದೆ.”

“ ಅಂತೂ ಬರ್‍ತಾರೇ ಅಂತ ಆಯಿತಲ್ಲಾ. ನಮ್ಮ ಮಟ್ಟಿಗೆ ನಾವು ಹೋಗೋಣಾ ಅಂತಿದ್ದೆವು. ಆಗಲಿಲ್ಲ. ಒಳ್ಳೇ ಕೆಲಸ. ಅವರ ಕಾಲ್ನಲ್ಲಿ ಅವರು ಬರ್‍ತಾರೆ. ನಾವೇನು ಮಾಡ್ಬೇಕಾಗಿದೆ. ಬರಲೇಳು ಶಾರದೇ!” ಎಂದರು ಶಾನಭೋಗರ ಶೇಷಮ್ಮ.

ಅಜ್ಜಿ ದೇವರ ದರ್ಶನಕ್ಕೆ ಬರಬಾರದೆಂದು ನಮ್ಮ ಅಪೇಕ್ಷೆಯಲ್ಲ. ಅವಳು ಬಂದರೆ ನಮಗೆ ಏನೋ ಬಿಕ್ಕಟ್ಟು. ಮನಸಾರ ಮಾತನಾಡುವು

ದಿಲ್ಲ. ತಿರುಗುವಂತಿಲ್ಲ. ದಾರಿಯುದ್ದಕ್ಕೂ ''ಅಲ್ಲಿ ಎಂಜಲು ತುಳಿತೀಯಲ್ಲೇ ದೇವರು ಕಣ್ಣು ಕೊಟ್ಟಿಲ್ಲವೇ ? ಮೈತುಂಬಾ ಸೆರಗೆಳೆದುಕೊ. ಗಾಳಿಗೆ ಹಾರಿ ಹೋದೀತು ? ಎಷ್ಟು ಗಟ್ಟಿಯಾಗಿ ನಗ್ತೀರೆ ಬೀದೀಲಿ ? ನೀವು ಹೆಂಗ ಸರಲ್ಲವೇನೇ?" ಇತ್ಯಾದಿ ಬಾಯಿ ಮುಚ್ಚದೆ ಹೇಳುತ್ತಲೇ ಇರುತ್ತಾಳೆ. ಈ ಗೊಣಗಾಟ ಯಾರಿಗೆ ಬೇಕು ? ಮನೆಯಲ್ಲಿ ಕೇಳಿ ಕೇಳಿ ಬೇಜಾರಾ ಗಿದೆ. ಒಂದು ದಿನ ಹೊರಗೆ ಬಿಡು-ಬೀಸಾಗಿ ಕಾಲ ಕಳೆಯೋಣಾ ಅಂದರೆ ಅಲ್ಲಿಗೂ ಬರುತ್ತಾಳಲ್ಲಾ ಎಂದೇ ನಮ್ಮ ಯೋಚನೆ. ಊರಲ್ಲಿ ಎಲ್ಲರಿಗೂ ಬುದ್ಧಿ ಹೇಳುವುದಕ್ಕೆ ಅವಳಿಗೆ ಹಕ್ಕಿತ್ತು. ಎಲ್ಲರ ಕಷ್ಟ ಸುಖದಲ್ಲಿಯೂ ಭೇದಭಾವವಿಲ್ಲದೆ ನೆರವಾಗುತ್ತಿದ್ದುದೇ ಇದಕ್ಕೆ ಕಾರಣ. ಎಲ್ಲರಿಗೂ ಅವ ಳಲ್ಲಿ ಗೌರವ. ಊರಿಗೇ ಹಿರಿಯಳೆಂಬ ಪೂಜ್ಯಭಾವನೆ. ಆದರೂ ಏತಕ್ಕೋ ಇದೊಂದು ಕಡೇಲಿ ಅಜ್ಜಿ ಬರುವುದು ಬೇಡ ಎನ್ನಿಸಿತ್ತು.

ಬಿಸಿಲು ತಾಪ ಇಳಿಮುಖವಾಗುವುದನ್ನೇ ಕಾದಿದ್ದು ಎಲ್ಲರೂ ಹೊರ ಟೆವು. ಎಲ್ಲರ ಕೈಯಲ್ಲೂ ಒಂದೊಂದು ಗಂಟು. ಒಂದೊಂದು ತಂಬಿಗೆ. ಎಲ್ಲಿಲ್ಲದ ಸಡಗರ. ಸ್ವಲ್ಪ ಗಾಳಿಯೂ ಬೀಸುತ್ತಿತ್ತು. ಮನಸ್ಸಿಗೆ ಹಿತವೆನಿ ಸುತ್ತಿತ್ತು. ಮಾತುಕತೆಗಳಲ್ಲಿ ದಾರಿಯು ಸವೆದುದರ ಪರಿವೆಯೇ ಇಲ್ಲ. ಮೂರು ಮೈಲುಗಳು ಕಳೆದಿರಬಹುದು. ಗಾಳಿ ಭಾರವಾಯಿತು. ಮೋಡ ಕವಿಯುತ್ತಾ ಬಂದಿತು. ಹತ್ತು ಹೆಜ್ಜೆ ಹಾಕುವಷ್ಟರಲ್ಲಿ ಮಳೆಯ ವಾಸನೆ ಸೂಚನೆ ಕೊಟ್ಟಿತು.

''ಬೇಗ ಬೇಗ ಹೆಜ್ಜೆ ಹಾಕಿರೇ. ಅಲ್ಲೇನೊ ಮನೆಗಳು ಕಾಣಿಸ್ತಿವೆ. ಅಲ್ಲಿಗಾದರೂ ಹೋಗಿ ಸೇರೋಣಾ " ಎಂದು ಅಜ್ಜಿ ಕೂಗಿದಳು.

"ಈಗೆಲ್ಲಿ ಮಳೆ ಬರುತ್ತಜ್ಜೀ! ಎಲ್ಲೋ ಎರಡು ಹನಿ ಅಷ್ಟೇ ಇನ್ನು ಮೂರೇ ಮೈಲಿ, ಹೊರಟು ಹೋಗೋಣಾ " ಎಂದೆ.

'ಸದ್ಯ ಆ ಹಳ್ಳಿತನಕ ಹೋಗಿ ಸೇರಿ, ಆ ಮೇಲೆ ಮೈಲಿ ಹೋಗುವಿ ರಂತೆ' ಎಂದಳು.

ಹಳ್ಳಿಯ ಹತ್ತಿರಕ್ಕೆ ಬರುವುದರೊಳಗೆ ಪಟಪಟನೆ ಹನಿ ಹಾಕಿತು. ಅಲ್ಲಿಯೇ ಇದ್ದ ಗುಡಿಯ ಅಂಗಳಕ್ಕೆ ಹೋಗಿ ನಿಂತೆವು. ಮಳೆ ಜೋರಾ ಯಿತು. ಕೈಸಾಲೆಗೆ ಹೋದೆವು. ಅಲ್ಲಿದ್ದ ಲಿಂಗಧಾರಿಗಳು ನಮ್ಮನ್ನು

ಕಂಡು 'ಅತ್ಲಾಗೆ ಓಗಿ ತಾಯಿಗೊಳಿರಾ, ನಮ್ಮ ಗುರುಗೋಳ್ ಬತ್ತಾರೆ' ಎಂದರು. ಪುನಃ ಅಂಗಳಕ್ಕೆ ಬಂದೆವು. ಮಳೆ ಕಮ್ಮಿಯಾಗಿತ್ತು. ಆದರೂ ಧಗೆ ಅಡಗಿರಲಿಲ್ಲ ಬಾಯಾರಿಕೆ. ಎದುರಿಗೆ ಭಾವಿ ಕಾಣಿಸಿತು. ನೀರು ತರೋಣವೆಂದು ತಂಬಿಗೆ ಹಿಡಿದು ನಾಲ್ವರು ಹೊರಟೆವು. ಐದಾರು ಜನ ಹೆಂಗಸರು ನೀರೆಳೆಯುತ್ತಿದ್ದರು.

ನಮ್ಮ ಮುಂದಾಳಾದ ಶೇಷಮ್ಮ "ಠವಷ್ಟು ಹಗ್ಗಾ ಇತ್ಲಾಗೆ ಹಾಕ್ತೀರೇನೇ ? ಒಂದು ತಂಬಿಗೆ ನೀರು ಸೇದ್ಕೋತೇವೆ" ಎಂದರು. ಅವರಲ್ಲೊಬ್ಬಳು ದುರುಗುಟ್ಟಿ ನೋಡುತ್ತಾ "ನೀವು ಯಾತರೋರು ? ಹಾರೋರಲ್ವಾ? ಏಂದು ಕೇಳಿದಳು.

'ಹೌದು ಕಣೇ!'

"ಆಗಾಕಿಲ್ಲಾ ಕಣ್ರವ್ವಾ, ನಮ್ಮ ಶಿವನಿಗಾಗದ್ದು ನೀವು ಮುಟ್ಟಿದ್ದು. ನಾವೇನ್ಮಾಡಾನೆ" ಎಂದು ಬಿಟ್ಟಳು. ನಮ್ಮ ಮುಖ ಪೆಚ್ಚು ಬಿತ್ತು. ಆದರೇನು ? ಬರಿ ತಂಬಿಗೆ ಹಿಡಿದು ಹಿಂತಿರುಗಿದೆವು. ನೀರಿಗೆ ಬಾಯಿಬಿಟ್ಟು ಕುಳಿತಿದ್ದ ಗೆಳೆತಿಯರು "ಶೇಷಮ್ಮನವರೇ, ನಿಮಗೂ ಕೊಡೊಲ್ಲಾ ಅಂದು ಬಿಟ್ಟರೇ? ಹೋಗಲಿ ಬಿಡಿ. ಇನ್ನೇನ್ಮಾಡೋದಿಕ್ಕಾಗುತ್ತೇ" ಎಂದರು. ಆ ಹೊತ್ತಿಗೆ ಗುಡಿಯ ಅರ್ಚಕ ಬಂದು "ಕದ ಇಕ್ಕಬೇಕು ತಾಯಿಗೊಳಿರಾ ! ಹೋರಿಕೆ ದಯಮಾಡ್ಸಿ" ಎಂದ. "ಅಯ್ಯೋ ರಾಮಾ! ಏನಪ್ಪಾ ಗ್ರಹಚಾರ" ಎನ್ನುತ್ತ ಗಂಟುಮೂಟೆ ಬಗಲಿಗೇರಿಸಿ ಬೀದಿಗೆ ಬಂದೆವು. ದೀಪವಿಲ್ಲ. ಮನೆಯೊಳಗಿನಿಂದ ಹಣತೆಯ ಬೆಳಕು ಮುಸುಕುಮುಸುಕಾಗಿ ಕಾಣಿಸುತ್ತಿತ್ತು. ಸಂಜೆ ಎನ್ನುವುದು ರಾತ್ರಿಯಾಗಿತ್ತು. ಮನೆಯ ಬಾಗಿಲುಗಳೂ ಶಬ್ದ ಮಾಡುತ್ತಾ ಮುಚ್ಚಿಬಿಟ್ಟುವು. ಮಾಡುವದೇನು? ಹಿಂದಕ್ಕೂ ಹೋಗುವಂತಿಲ್ಲಾ, ಮುಂದಕ್ಕೂ ಸಾಗುವಂತಿಲ್ಲ. ಹಳ್ಳಿಯಲ್ಲಿ ಆಶ್ರಯ ಸಿಕ್ಕುವದು ಅಸಾಧ್ಯ. ರಾತ್ರಿಯನ್ನು ಎಲ್ಲಿ ಕಳೆಯುವದು ? ಹೇಗೆ ಕಳೆಯುವುದು ? ಹೊಟ್ಟೆಯಲ್ಲಿ ತಾಳಹಾಕುತ್ತಿದೆ, ಗಂಟಲೊಣಗುತ್ತಿದೆ. ಗಾಳಿ, ಛಳಿ. ಎಲ್ಲರಿಗೂ ಚಿಂತೆಗಿಟ್ಟಿತು.

"ಬರದೇ ಬರದೇ ಬಂದೆವಲ್ರೆ ! ಏತಕ್ಕೆ ಹೀಗಾಯಿತಪ್ಪಾ !" ಎಂದರು ಸುಬ್ಬಮ್ಮ.

" ನಾನು ಹೇಳ್ತೀನೆ, ಕೇಳಿ. ಅಜ್ಜೀನ ಬಿಟ್ಟು ಹೋಗೋಣ ಅಂತ ಸಂಚು ಮಾಡಿದಿರಿ. ಅದಕ್ಕೆ ಹೀಗಾಯಿತು ಅಲ್ವೇ ?" ಎಂದಳು ವೆಂಕು.

" ಏನು ಮಾಡಿದೆವೋ, ಏತಕ್ಕಾಯಿತೋ, ಆ ಪರಮಾತ್ಮ ಬಲ್ಲ. ಮಾನ ಪ್ರಾಣ ಎರಡಕ್ಕೂ ಸಂಚುಕಾರ ಬಂದಿದೆ. ಸ್ವಾಮೀ! ನಿನ್ನ ತೀರಿಗೆ ಕರೆಯಿಸಿಕೊಳ್ಳುವ ಭಾರ ನಿನ್ನದಪ್ಪಾ. ಏನಪರಾಧ ಮಾಡಿದ್ದರೂ ಕ್ಷಮಿಸಿ ಕಾಪಾಡು ಶ್ರೀಹರಿ ! " ಎಂದು ಕೈಮುಗಿದೆ. ಎಲ್ಲರೂ ಕೈಮುಗಿದರು.

ಅಜ್ಜಿ ನನಗಿಂತ ಹತ್ತು ಮಾರು ಹಿಂದಿದ್ದಳು. ತಿರುಗಿ ನೋಡಿದರೆ ಅವಳಲ್ಲಿಲ್ಲವೇ ಇಲ್ಲ ಒಬ್ಬರ ಮನೆಯ ಜಗುಲಿ ಏರಿ, ಮೂಲೆ ಹಿಡಿದು ಕುಳಿತುಬಿಟ್ಟಿದ್ದಾಳೆ. " ಕಣ್ಣು ಕಾಣಿಸದು ಏನು ಮಾಡಿಯಾಳು ? ಬರ ಬೇಡಾ ಅಂದರೂ ಮೊಂಡಾಟದಲ್ಲಿ ಬಂದಾಳೆ. " ಎಂದುಕೊಳ್ಳುತ್ತ ಅವಳಿದ್ದಲ್ಲಿಗೆ ಹೋದೆವು.

"ಇಲ್ಯಾತಕ್ಕೆ ಕೂತ್ಬಿಟ್ರಿ ಅಜ್ಜಮ್ಮಾ, ಬನ್ನಿ ಹೋಗೋಣ" ಎಂದೆವು.

"ಈ ಕತ್ಲಲ್ಲಿ ಎಲ್ಲಿಗೇ ಅಂತಾ ಹೋಗೋದ್ರೀ? ಎಲ್ಲಿದ್ದರೂ ಕಾಪಾಡೋನು ದೇವರೇ ಸುಮ್ಮನೆ ಇಲ್ಲೇ ಕೂತುಕೊಳ್ಳಿ " ಎಂದೇ ಬಿಟ್ಟಳು. ಯತ್ನವಿಲ್ಲ ಕಟ್ಟೆಯೇರಿ ಕುಳಿತೆವು. ಮನೆ ಬಾಗಿಲು ತೆರೆದು ಒಬ್ಬಾಕೆ ಹೊರಗೆ ತಲೆ ಹಾಕಿ " ಮಳೆಗೆ ಯಾರೋ ಕುಂತವ್ರೇನೋ " ಎಂದುಕೊಳ್ಳುತ್ತ ಕದವಿಕ್ಕಿಬಿಟ್ಟಳು. ಒಳಗೆ ಕರೆದಾರೆಂದು ತವಕಿಸುತ್ತಿದ್ದ ನಮ್ಮಾಸೆ ಕುಸಿದು ಬಿತ್ತು. ಶಾಲು ದುಪ್ಪಟಿಗಳನ್ನು ಹೊದ್ದುಕೊಂಡೆವು. ನನಗೂ, ನನ್ನ ವಾರಗೆಯವಳೇ ಆದ ಲಲಿತೆಗೂ ಎದೆ ಹೊಡೆದುಕೊಳ್ಳುತ್ತಿತ್ತು. ಕಣ್ಣಲ್ಲಿ ನೀರೂರುತ್ತಿತ್ತು. ಉಪಾಯವಿಲ್ಲ. ಒಬ್ಬರ ಮುಖ ಮತ್ತೊಬ್ಬರು ನೋಡುತ್ತಾ ಕೂತೆವು. ಎಲ್ಲರಿಗೂ ತೂಕಡಿಕೆ. ಇದ್ದಕ್ಕಿದ್ದಂತೆ ಅಜ್ಜಿಯ ಧ್ವನಿ " ಶಿವಬಾರೋ। ದಯಬೀರೋ॥ " ಎಂದು ಹಾಡುತ್ತಿದ್ದಾಳೆ. ಬೆಕ್ಕಸ ಬೆರಗಾಗಿ ಅವಳ ಕಡೆಗೇ ತಿರುಗಿದೆವು. ಆ ಹಾಡನ್ನು ಮುಗಿಸಿ,

ಮನೆ ದೇವತೆಯರಿರಾ । ನಂದನ ದೇವತೆಯರಿರಾ ।
ದೆಸೆಯ ದೇವತೆಯರಿರಾ ॥

ಎನ್ನುವ ಪದ್ಯ ಸುರು ಮಾಡಿ,

ಶಿವನ ಮೈಮೆಯು । ಕಾಣಬನ್ನಿರೇ,
ನೀವು ಬನ್ನಿರೇ ॥

ಎಂದು ಹಾಡತೊಡಗಿದಳು. ಮನೆಯವರೆಲ್ಲರೂ ಬಾಗಿಲು ತೆಗೆದು ಹೊಸ್ತಿಲ ಮೇಲೆ ನಿಂತರು. ಮುದುಕಿಯೊಬ್ಬಳು ಮುಂದೆ ಬಂದು ಕುಳಿತು "ಏಳ್ ನನ್ನ ತಾಯಿ ಕೇಳಾರಾ ಕೇಳಾನೆ ಅಗರಾಣ ಇದ್ದೇ ಅವೆ" ಎಂದಳು. ಅಜ್ಜಿಗೆ ಉತ್ಸಾಹ ಹೆಚ್ಚಿರಬಹುದು. ಕಂಠವೆತ್ತಿ ಹಾಡಿದಳು. ಈ ಇಳಿ ವಯಸ್ಸಿನಲ್ಲಿಯೂ ಎಷ್ಟು ಚೆನ್ನಾಗಿ ಹಾಡುತ್ತಾಳೆ! ದಿನವೂ ಅವಳು ಹಾಡುವುದನ್ನು ಕೇಳಿದ್ದ ನಮಗೂ ಸಹ ಆ ದಿನ ಅವಳ ಹಾಡುಗಳು ಜೀವಕ್ಕೆ ಇಂಪುಗೊಡುತ್ತಿದ್ದುವು. ಅವು ಭಕ್ತಿರಸವನ್ನುಕ್ಕಿಸುತ್ತಿತ್ತು. ಹಿಂದೆ ಕೇಳದೇ ಇದ್ದ ಅನೇಕ ಪದ್ಯಗಳನ್ನೂ ಹಾಡುಗಳನ್ನೂ ಅಂದು ಕೇಳಿದೆವು. ಅವೆಲ್ಲವೂ ಅವಳು ಕಟ್ಟಿ ಕಟ್ಟಿ ಹಾಡಿದವುಗಳೆಂದು ಆ ಮೇಲೆ ತಿಳಿಯು ಬಂತು ಆಗ ನಮ್ಮ ಆಶ್ಚರ್ಯ ಅಷ್ಟಿಷ್ಟಲ್ಲ.

ಹಾಡುವುದಕ್ಕೆ ಮೊದಲು ಮಾಡಿ ಹತ್ತು ನಿಮಿಷಗಳಾಗಿರಬಹುದು. ಜನರು ತಂಡತಂಡವಾಗಿ ಬರಹತ್ತಿದರು. ಆಗ ಮಳೆಯೂ ಪೂರ್ತಿಯಾಗಿ ನಿಂತಿತು. ಬೆಳದಿಂಗಳು ಚೆಲ್ಲುತ್ತಿತ್ತು. ಆದರೂ ಅಸಾಧ್ಯ ಛಳಿ. ಯಜಮಾನಿ ಮುದುಕಿ "ಅವ್ವಾ! ಒಳಗಡೇ ತೊಟ್ಟೀಗೆ ಬಂದ್ಬುಡಿ. ನಿಮಗೂ ಸಳಿ. ಜನಕ್ಕೂ ಸಳಿ" ಎಂದಳು.

ಅಷ್ಟು ಅಂದಾರೆ ಎಂದಿದ್ದ ನಾವು ತಟಕ್ಕನೆ ಒಳಹೊಕ್ಕೆವು. ಜನರ ಗುಂಪು ಜಮಾಯಿಸುತ್ತಿತ್ತು. ಅಜ್ಜಿಯು ಗಂಟಲಾರಿ ಕೆಕ್ಕರಿಸಿದಳು. ಕೂಡಲೇ ಯಜಮಾನಿ "ಅಮ್ಮನೋರ ಗಂಟಳೊಣಗದೆ ಕಣ್ ಮೊಗಾ, ಅಸೀನ ಆಲ್ ತತ್ತಾ, ಓಗಲೇ ಬಿರ್ರ್ರನೇ!" ಎಂದಳು. ಅವಳಾಜ್ಞೆ ನೆರೆದವರಿಗೆಲ್ಲರಿಗೂ ಅನ್ವಯಿಸಿತೋ ಎನ್ನುವಂತೆ, ಕಾಲುಗಂಟೆಯೊಳಗೆ ಮನೆಗೊಂದು ಪಾವಿನಂತೆ ಹಾಲು ಬಂದುಬಿಟ್ಟಿತು. "ಭತ್ತದ ಹುಲ್ಲನ್ನೊಟ್ಟಿ, ಬೆಂಕಿ ಇಟ್ಟು, ನೀವೇ ಕಾಯಿಸಿಕೊಳ್ಳೀ ತಾಯೀ. ನಮ್ಮ ಒಲೆ ಮೇಕೆ ಕಾಸಿದ್ದು ನಿಮಗಾಗಾಕಿಲ್ಲಾ" ಎಂದರು.

ಶೇಷಮ್ಮ, ಸುಬ್ಬಕ್ಕ ಚಟ್ಟನೆದ್ದು ಹಾಲು ಕಾಯಿಸಿ ನಮಗೆ ಕೊಟ್ಟರು. 'ಬದುಕಿದಿಯಾ ಬಡಜೀವ' ಎಂದುಕೊಳ್ಳುತ್ತಾ ಗಂಟಲಿನೊಳಗೆ

ಧಾರಾಳವಾಗಿ ಇಳಿಬಿಟ್ಟೆವು ಆ ಹೊತ್ತಿಗೆ ಅಜ್ಜಿ, ಅಕ್ಕಮಹಾದೇವಿಯ "ಲಿಂಗಕ್ಕೆನ್ನ ಮದುವೆ ಮಾಡಿದರೂ" ಎನ್ನುವ ಪದ್ಯವನ್ನೂ, ಶಿವ-ಗಂಗೆಯರ ಸ್ವಾರಸ್ಯವಾದ ಸಂವಾದವನ್ನೂ ಹಾಡಿ, ತತ್ವಪದಗಳನ್ನು ಹೇಳುತ್ತಿದ್ದಳು. ಜನರೆಲ್ಲ ತಲೆದೂಗಿ "ಇಂತಾ ಪರಸಂಗಾ ನಾವು ಕೇಳೇ ಇರ್ನಿಲ್ಲ ಕಣಾ!" ಎಂದುಕೊಳ್ಳುತ್ತಾ ಮನೆಯತ್ತ ನಡೆದರು. ಮಂಗಳ ಮುಗಿಸುವ ವೇಳೆಗೆ ಹನ್ನೆರಡು ಹೊಡೆದಿರಬಹುದು. ಮನೆಯಾಕೆ ಉದ್ದಕ್ಕೆ ಅಡ್ಡಬಿದ್ದು, 'ಪದ ಕೇಳಿ ಬಾಳಾ ಸಂತೋಸ ಆಯ್ತು ಕಣವ್ವಾ. ಕಾಟ ಕರ್ಮ ಎಲ್ಲಾ ಪರ್‍ಯಾರಾದೊ ನಿಮ್ಮ ಪಾದ! ಎತ್ತಾಗಿಂದ ಬಂದ್ರಿ? ಎತ್ತಾಗೆ ದಯಮಾಡಿಸಬೇಕಾಗಿತ್ರೂ?' ಎಂದಳು. ಅಜ್ಜಿ ನಡೆದ ಸಂಗತಿಯನ್ನೆಲ್ಲ ವಿವರಿಸಿ, ಅವಳ ಮತ್ತು ಆ ಹಳ್ಳಿಯ ಯೋಗಕ್ಷೇಮವನ್ನು ಕೇಳಿ ತಿಳಿದುಕೊಂಡಳು. ಆಮೇಲೆ ಮನೆಯಾಕೆ ಚಾಪೆಯನ್ನೂ ಬಾಳೆಹಣ್ಣು, ಅಡಕೆಲೆಯನ್ನೂ ನಮ್ಮ ಮುಂದಿಟ್ಟು 'ಒಸಮಂದಲಿಗೆ ಕಣವ್ವಾ! ಆಸಕೊಂಡೋವಲ್ರಾ. ಪಲಾರಾ ಮಾಡಿ ಮನಿಕೋಳಿ. ಎದರಿಕೆ ಏನಿಲ್ಲಾ. ಒತ್ತಾರೆ ಕಳಗಸಿ ಕೊಡ್ತೀನಿ ಬಿಸಿಲೇರೊದ್ರೊಳೀಕೆ ತೇರಿಗೆ ಓಗ್ಬೋದ್ರು' ಎಂದಳು. ಚಾಪೆಯನ್ನು ಹಾಸಿ ತಲೆಗೆ ಕೈಕೊಟ್ಟು ಮಲಗಿದೆವು.

ಇನ್ನೂ ನಿದ್ರೆಯ ಭರ. ಅಜ್ಜಿ ಎಲ್ಲರನ್ನೂ ತಟ್ಟಿ ಎಬ್ಬಿಸಿದಳು. ಆಗಲೇ ಬೆಳಕು ಮೂಡುತ್ತಿದೆ ಗಂಟು ಮೂಟೆ ಭದ್ರಪಡಿಸಿ ಮನೆಯನ್ನು ಬಿಟ್ಟೆವು. ಯಜಮಾನಿಯೂ ಅವಳ ಮಗನೂ ನಮ್ಮೊಡನೆ ಬಂದರು. ಹಳ್ಳಿಯ ಬಾಗಿಲಿಗೆ ಬರುವ ಹೊತ್ತಿಗೆ ರಾತ್ರಿ ಹಾಡು ಕೇಳಲು ಬಂದಿದ್ದವರೆಲ್ಲಾ ಬಂದು ಅಜ್ಜಿಗೆ ನಮಸ್ಕಾರ ಮಾಡಿಬಿಟ್ಟರು. ಹೂವು, ವೀಳ್ಯದೆಲೆ, ಬಾಳೇಹಣ್ಣು "ಬೇಡ ಬೇಡ"ವೆಂದರೂ ತಂದಿಟ್ಟು "ತಾಯೀ! ವಾಪಸ್ ಹೋಗುವಾಗಲೂ ಬಂದಿಳೀಬೇಕ್ರೂ. ನಿಮ್ಮ ಒಟ್ಟೇ ತುಂಬಾ ಶೀವನ ಪದ ತುಂಬಿವೆ. ಏಳಬೇಕ್ರೂ ನಿಮ್ಮ ಪದಾ!" ಎಂದರು. ನಮ್ಮ ಆನಂದ ಎಲ್ಲೆ ಮೀರಿತು. ಆಶ್ಚರ್ಯ ಎಲ್ಲೆ ಮೀರಿತು. ಹಳ್ಳಿಗರದು ಮೂಢಭಕ್ತಿಯೇ? ಅಲ್ಲ. ಎಳೆಗೂಸಿನ ಭಕ್ತಿ ಅವರದು. ತಿಳುವಳಿಕೆ ಸಾಲದೆ ಒರಟಾಗಿರಬಹುದೇ ಹೊರತು ಅದು ಹುಟ್ಟಿಬಂದ ಗುಣವಲ್ಲ ಎನಿಸಿತು.

ಎಷ್ಟೋ ದೂರದ ವರೆವಿಗೂ ಬಂದು ನಮ್ಮನ್ನು ಬೀಳ್ಕೊಟ್ಟು ಹಳ್ಳಿ

ಗರು ಹಿಂದಿರುಗಿದರು. ನಮ್ಮ ದಾರಿ ಸಾಗುತ್ತಿತ್ತು. ಎಲ್ಲರ ತಲೆಯಲ್ಲಿಯೂ ಒಂದೇ ಯೋಚನೆ ಪಶ್ಚಾತ್ತಾಪ. ದೇವರಂತಹ ಅಜ್ಜಿಯನ್ನು ಬಿಟ್ಟು ಬರಬೇಕೆಂದು ಎಷ್ಟು ಸಂಚುಮಾಡಿಕೊಂಡೆವಲ್ಲಾ! ನಿನ್ನೆ ಅವಳಿಲ್ಲದಿದ್ದರೆ, ನಮ್ಮಮಾನ, ಪ್ರಾಣ ಎರಡೂ ಏನಾಗುತ್ತಿದ್ದವೋ! ನೆನಸಿಕೊಂಡರೆ ಮೈ ನಡುಗುತ್ತದೆ. ಅಜ್ಜಿ ಸಂಪ್ರದಾಯಬದ್ಧಳಾದ ಗೊಡ್ಡು ಮುದುಕಿಯಲ್ಲ. ಓದುಬರಹ ಬಾರದ ಮಾತ್ರಕ್ಕೇ ಅವಿದ್ಯಾವಂತಳೆಂಬ ಭಾವನೆ ನಮ್ಮ ಮನಸ್ಸಿನಿಂದ ತೊಲಗಿತು. ಆ ಕಾಯಶಕ್ತಿ, ಕವನಶಕ್ತಿ ನಮಗೆಲ್ಲಿಯದು ? ಮುಂದಾಲೋಚನೆ ಇಲ್ಲದೆ ಹಾರಾಡುವ ಪತಂಗದ ಹುಳುಗಳು ನಾವು. ಕಷ್ಟಕಾಣಿಸಿಕೊಂಡಾಗ ಕಣ್ಣೀರು ಕೋಡಿ ಹರಿಸುವುದೊಂದೇ ನಮಗೆ ಬರುವುದು. ಆದರೆ ಅಜ್ಜಿ ಎಷ್ಟು ಧೈರ್ಯದಿಂದ, ಉಪಾಯದಿಂದ ವಿಪತ್ತುಗಳನ್ನೆದುರಿಸಿ ಜನರಿಗೂ, ನಮಗೂ ಹಿತವನ್ನೆಸಗಿದಳು. ಅವಳಾಡುವ ಪ್ರತಿ ವಾಕ್ಯವೂ ಅರಿತು ಸುರಿತ ಅನುಭವದ ನಾದ. ಅವಳ ಜೀವನ ಪುಣ್ಯಮಯ ಅವಳನ್ನು ಎಷ್ಟು ವಂದಿಸಿದರೂ ಅಲ್ಪವೇ

ತೇರು ತೀರಿಸಿಕೊಂಡು ಊರು ಸೇರಿದೆವು ಎಲ್ಲರ ಬಾಯಲ್ಲೂ ಅಜ್ಜೀ ಕತೆಯೇ ನನಗಂತೂ ಅವಳಲ್ಲಿ ಅತಿಶಯವಾದ ಗೌರವ, ವಿಶ್ವಾಸ. ಎಲ್ಲರೂ ಸೇರಿ ಅವಳಿಗೆ ಒಳ್ಳೆಯ 'ಕಾಶ್ಮೀರ್ ಶಾಲ'ನ್ನು ಕೊಂಡು ಕೊಟ್ಟೆವು. ಅವಳು ಅದಕ್ಕೆ 'ತೇರಿನ ಶಾಲು' ಎಂದು ನಾಮಕರಣ ಮಾಡಿಬಿಟ್ಟಿದ್ದಾಳೆ. ಶಾಲಿನ ವಿಚಾರ ಏನಾದರೂ ಮಾತು ಬಂದರೆ, ಈ ಕತೆಯನ್ನೆಲ್ಲಾ ಹೇಳುತ್ತಾಳೆ.

# ಬಾಳಿನ ನೆನಪು

ಅಜ್ಜಿ ಎಂದರೆ ನನಗೊಬ್ಬಳಿಗೇ ಯಾಕೆ, ಎಲ್ಲರಿಗೂ ಬಲು ಪ್ರೇಮ ಏಕೆ? ಮನೆಯಲ್ಲಿ ಅಜ್ಜಿ ಎನ್ನುವವರೊಬ್ಬರಿದ್ದರೆ ಕೈ ಬುಟ್ಟಿಗಳಲ್ಲಿಯೂ ಡಬ್ಬಿಗಳಲ್ಲಿಯೂ ಉಂಡೆಯೋ, ಚಕ್ಕುಲಿಯೋ ಏನಾದರೂ ನಾಲ್ಕು ಬಗೆಯ ಖಾರ ಸಿಹಿ ತಿಂಡಿಗಳು ಭರ್ತಿಯಾಗಿರುತ್ತವೆ. ಏನೂ ಇಲ್ಲಾ ಎಂದರೂ ಕಡೆಗೆ ಹುರಿಗಾಳು, ಅವಲಕ್ಕಿಯಾದರೂ ಇದ್ದೇ ಇರುತ್ತದೆ ಅದರಿಂದಲೇ ಮತ್ತೆ, ಅಜ್ಜಿಯ ಹಿಂದಹಿಂದೇ ಹುಡುಗರ ಹಿಂಡು ಸುತ್ತುತ್ತಾ ಇರುವುದು. ಮೇಲಾಗಿ, ಮನೆಯಲ್ಲಿ ಮಕ್ಕಳನ್ನು ಯಾರಾದರೂ ಗದರಿಸಿಕೊಂಡರೆ, ಅಜ್ಜಿ ಮಕ್ಕಳ ಪರವಹಿಸಿ ಮಾತನಾಡುತ್ತಾಳೆ. ನಿಜವಾಗಿಯೂ ಅವರಲ್ಲಿ ತಪ್ಪಿದ್ದರೂ, ಬಿಟ್ಟುಕೊಡುವುದಿಲ್ಲ ಇಷ್ಟೇ ಅಲ್ಲದೆ, ಅವಳಲ್ಲಿ ಮಕ್ಕಳನ್ನು ಆಕರ್ಷಿಸುವ ಇನ್ನೂ ಒಂದು ದೊಡ್ಡ ಗುಣ ಎಂದರೆ, ಸೊಗನಾದ ಪುಟ್ಟ ಪುಟ್ಟ ಕಥೆಗಳನ್ನು ಹೇಳಿ ಮಕ್ಕಳ ಹೊಟ್ಟೆ ಹುಣ್ಣಾಗುವಂತೆ ನಗಿಸುವುದು. ಅಥವಾ ಅವುಗಳ ಬಾಯಿಂದ 'ಅಯ್ಯೋ ಪಾಪ!' ಎನ್ನಿಸುವುದು.

ಅಜ್ಜಿ ಎಂದರೆ ನಮ್ಮ ತಂದೆಯ ತಾಯಿಯೋ ಅಥವಾ ತಾಯಿಯ ತಾಯಿಯೋ ಎಂದು ತಿಳಿಯಬೇಡಿ ನಾನು ಹೇಳುವ ಅಜ್ಜಿ, ನಮ್ಮ ಊರಿಗೇ ಅಜ್ಜಿ ನಮ್ಮ ಊರಿನಲ್ಲಿ ತಲೆನರೆತು, ಹಲ್ಲು ಬಿದ್ದು, ಆಗಲೇ ಎಷ್ಟೋ ಮೊಮ್ಮಕ್ಕಳುಗಳಿಗೆ ಅಜ್ಜಿ ಅಜ್ಜಂದಿರಾಗಿರುವವರೆಲ್ಲಾ ಈ ಅಜ್ಜಿಯನ್ನು 'ಅಜ್ಜೀ' ಎಂದೇ ಕರೆಯಬೇಕಾದರೆ ಅವಳು ಊರಿಗೇ ಅಜ್ಜಿ ಎನ್ನುವುದರಲ್ಲಿ ಸಂದೇಹವೇನು? ಅವಳು ಎಲ್ಲರನ್ನೂ ಏಕವಚನದಲ್ಲಿಯೇ ಸಂಬೋಧಿಸುತ್ತಾಳೆ. ಎಲ್ಲರಿಗೂ ಬುದ್ಧಿ ಹೇಳುತ್ತಾಳೆ. ಯಾರ ಮನೆಯವರಿಗೇ ಆಗಲಿ ಶೀತವೋ, ವಾತವೋ, ಹೊಟ್ಟೆ ನೋವೋ, ತಲೆ ನೋವೋ, ಮೂಗು ನೋವೋ ಏನಾದರೂ ಆದರೆ 'ಅಜ್ಜಿಯನ್ನು ಕರೆಯಿರಿ' ಎನ್ನುತ್ತಾರೆ ಅವಳು ಬಂದು ಏನೋ ಒಂದು ಚುಟಕಾ ಔಷಧಿ ಮಾಡಿದಳೆಂದರೆ ರೋಗ ಗುಣವಾಗಿ ಹೋಗುತ್ತದೆ. ಊರಿನವರಿಗೆ ಅವಳಲ್ಲಿ ಅಂಥ ನಂಬಿಕೆ! ಅಳುತ್ತಿರುವ ಮಕ್ಕಳು 'ಅಜ್ಜಿ ಬಂದಳು' ಎಂದರೆ ಹಿಗ್ಗಿ ಸುಮ್ಮನಾಗುತ್ತವೆ. ಅಜ್ಜಿಯ ಪುಟ್ಟ ಗಂಟಿನಲ್ಲಿ ಏನಾದರೂ ಇದ್ದೇ ಇರುತ್ತದೆ ಎನ್ನು

ವುದು ಅವಕ್ಕೆಲ್ಲಾ ಗೊತ್ತು. ಮುಖ್ಯವಾಗಿ ಅವಳು ಊರ ಮಕ್ಕಳನ್ನೆಲ್ಲಾ ತನ್ನ ಸ್ವಂತ ಮಕ್ಕಳೆಂದು ತಿಳಿದಿದ್ದಾಳೆ.

ಈ ಇಳಿ ವಯಸ್ಸಿನಲ್ಲಿಯೇ ಅಜ್ಜಿ ಇಷ್ಟು ಗಟ್ಟಿಮುಟ್ಟಾಗಿ ತನ್ನ ಸ್ವಂತ ಕೆಲಸಗಳನ್ನೆಲ್ಲಾ ತಾನೇ ಮಾಡಿಕೊಳ್ಳುವುದೇ ಅಲ್ಲದೆ, ನಿತ್ಯವೂ ಊರಿನವರೆಲ್ಲರ ಯೋಗಕ್ಷೇಮವನ್ನೂ ಒಂದು ಸುತ್ತು ವಿಚಾರಿಸಿಕೊಂಡು ಬಂದು, ಸಂಜೆಯ ಹೊತ್ತಿಗೆ ಗುಡಿಗೆ ಹೋಗಿ, ಪ್ರದಕ್ಷಿಣೆ ನಮಸ್ಕಾರ ಹಾಕಿ, ಆ ಮೇಲೆ ಮನೆ ಸೇರಿಕೊಳ್ಳುತ್ತಾಳೆ ಎಂದ ಮೇಲೆ ಹರೆಯದವಳಿದ್ದಾಗ ಅವಳ ಶಕ್ತಿ ಇನ್ನೆಷ್ಟು ಹೇಗಿದ್ದಿರಬಹುದು ? ಹೊತ್ತು ಹುಟ್ಟಲು ಮುಂಚೆ ಏಳುವುದೂ ತಣ್ಣೀರು ಸ್ನಾನ ಮಾಡುವುದೂ ನೋಮಾರಿಯಾಗದೆ ಚಟುವಟಿಕೆಯಾಗಿರುವುದೂ ಅವಳು ಲವಲವಿಕೆಯಿಂದ ಶಕ್ತಿವಂತಳಾಗಿರುವುದಕ್ಕೆ ಕಾರಣವಾಗಿವೆ ಈ ವಿಷಯ ಊರಿನವರಿಗೆಲ್ಲಾ ಗೊತ್ತಿದ್ದರೂ ಯಾರೂ ಅವಳ ಆಚರಣೆಯನ್ನು ಅನುಷ್ಠಾನಕ್ಕೆ ತರುವ ಪ್ರಯತ್ನಪಟ್ಟಿಲ್ಲ. ಪಟ್ಟಿದ್ದರೂ ಆರಂಭದಲ್ಲಿ ಎರಡೆರಡು ದಿನ ಮಾತ್ರ.

ಮೇಲಿನ ಬೀದಿಯಿಂದ ಅಜ್ಜಿ ನಮ್ಮ ಮನೆಗೆ ಬರುವ ಹೊತ್ತಿಗೆ ಐದು ಗಂಟೆಯಾಗುತ್ತದೆ. ನಾನು ಶಾಲೆಯಿಂದ ಬರುವ ಹೊತ್ತಿಗೆ ಮನೆಯಲ್ಲಿ ಹಾಜರಾಗಿರುತ್ತಾಳೆ. ಅಥವಾ ದಾರಿಯಲ್ಲೇ ಸಂಧಿಸುತ್ತೇವೆ. ಅವಳ ಕೈಯಲ್ಲೊಂದು ದೊಣ್ಣೆ, ಒಂದು ಹತ್ತಿಯ ಬುಟ್ಟಿ. ಮತ್ತೊಂದು ಕೈಯಲ್ಲಿ ಪುಟ್ಟ ಗಂಟು ಇಷ್ಟೊ ಇದ್ದೇ ಇರುತ್ತವೆ. ದೊಣ್ಣೆಯ ಆಧಾರ ಅವಳಿಗೆ ಬೇಕಿಲ್ಲವಂತೆ. ಸುಮ್ಮನೆ ಕೈಗಾವಲಿಗೆಂದು ತರುತ್ತಾಳಂತೆ. ಅದು ಹೇಗಾದರೂ ಆಗಲಿ. ನನ್ನ ಕಣ್ಣೆಲ್ಲಾ ಅಜ್ಜಿಯ ಪುಟ್ಟ ಗಂಟಿನ ಮೇಲೆ ಏನನ್ನೋ ತಿನ್ನಲು ತಂದಿದ್ದಾಳೆಂದು ಗೊತ್ತು. ಏಕೆಂದರೆ ಅವಳಿಗೆ ನನ್ನ ಮೇಲೆ ತುಂಬಾ ಮಮತೆ. ನನಗೂ ಅವಳಿಗೂ ಯಾವ ವಿಧದ ದೇಹ ಸಂಬಂಧವಿಲ್ಲದಿದ್ದರೂ ಅದೇಕೋ ಅವಳಿಗೆ ಅಷ್ಟೊಂದು ಮಮತೆ ಎಷ್ಟೋ ನಾರಿ ಅವಳು ನಮ್ಮ ತಾಯಿಯೊಂದಿಗೆ "ಶಾರದೆ ಎಲ್ಲಾ ಹುಡಗೀರ ಹಾಗಲ್ಲ ಕಣೆ. ಭೋ ಜಾಣೆ! ಭೋ ಜಾಣೆ! ಏನು ಪುಣ್ಯ ಮಾಡಿದಾನ್ಯೋ ಅವಳ ಗಂಡ ಇಂಥಾ ಜಾಣೇನ ಮಾಡಿಕೊಳ್ಳೋಕೆ" ಎಂದು ಹೇಳಿಕೊಳ್ಳುವುದನ್ನು ಕಿವಿಯಾರ ಕೇಳಿದ್ದೇನೆ. ಹಾಗೆಯೇ ಅವಳಲ್ಲಿ

ನನಗೆ ತುಂಬಾ ಪ್ರೀತಿ, ಸಲಿಗೆ. ನನಗೆ ಸ್ವಂತ ಅಜ್ಜಿ ಇಲ್ಲದಿದ್ದರೂ ಇವ ಳಾದರೂ ಇದ್ದಾಳಲ್ಲಾ ಎಂದು ನನಗೊಂದು ಹಿಗ್ಗು. ಒಂದೊಂದು ಸಾರಿ ಇವಳು ನಮ್ಮ ಸ್ವಂತ ಅಜ್ಜಿಯೇ ಆಗಿದ್ದರೆ? ಅಂತಾ ಎನ್ನಿಸುತ್ತದೆ.

o o o o o

ನಾನು ಅತ್ತೆಯ ಮನೆಗೆ ಬಂದಿದ್ದರೂ, ಅಜ್ಜಿ ಮಾತ್ರ ನನ್ನ ಯೋಗ ಕ್ಷೇಮವನ್ನು ವಿಚಾರಿಸುವುದನ್ನು ಬಿಟ್ಟುಬಿಡಲಿಲ್ಲ. ನನ್ನ ಕಾಗದ ಬಂದಿ ದೆಯೇ? ಇಲ್ಲವೇ? ಎಂದು ಕೇಳುತ್ತಲೇ ಇರುತ್ತಾಳಂತೆ. ನಾನು ತೌರೂರಿಗೆ ಹೋದ ಸುದ್ದಿ ಕೇಳಿಬಿಟ್ಟರಂತೂ ಪುಟ್ಟ ಗಂಟನ್ನೂ ತೆಗೆದು ಕೊಂಡು ಬಂದೇ ಬಿಡುತ್ತಾಳೆ. ನನ್ನ ವಿಷಯಗಳನ್ನೇ ಅಲ್ಲದೆ, ನಮ್ಮ ಊರಿನ ಸುದ್ದಿಯನ್ನೆಲ್ಲಾ ಹೇಳಿದ ಹೊರತು ಬಿಡುವುದಿಲ್ಲ. ತಾನೂ ಊರಿನ ಸುದ್ದಿಯನ್ನೆಲ್ಲ ಹೇಳಿ ಮುಗಿಸುತ್ತಾಳೆ. ಒಂದೇ ಒಂದು ದಿನ ಅಜ್ಜಿ ಬಾರದಿದ್ದರೂ ಹೊತ್ತು ಹೋಗುವುದೇ ಕಷ್ಟವಾಗುತ್ತದೆ. ಅವಳು ಮಾತಿಗೆ ಮೊದಲು ಮಾಡಿದರೆ, ದಿನ ಒಂದು ಕ್ಷಣ. ಅವಳು ಕಳೆದ ಆ ಕಷ್ಟ ಸುಖದ ದಿನಗಳೂ ತೌರುಮನೆಯಲ್ಲಿ ಸಲಿಗೆಯಿಂದ ಬೆಳೆದುದೂ ಅತ್ತೆಯ ಮನೆಯಲ್ಲಿ ಅಸಾಧ್ಯ ಕಿರುಕುಳಕ್ಕೆ ಸಿಕ್ಕಿದ್ದರೂ, ಗಂಡನ ಅನು ಪಮ ಪ್ರೇಮಕ್ಕಾಗಿ ಎಲ್ಲವನ್ನೂ ಸಹಿಸುತ್ತಿದ್ದುದೂ, ಮಕ್ಕಳಿಗಾಗಿ ಹಂಬ ಲಿಸಿದ್ದೂ ಎಲ್ಲವನ್ನೂ ದೊಡ್ಡ ಕತೆಯಾಗಿ ಬಹು ಸ್ವಾರಸ್ಯವಾಗಿ ಹೇಳು ತ್ತಾಳೆ. ಮುಖ್ಯವಾಗಿ, ಅವಳ ಮಾತುಗಳು ನಿಜಾನುಭವವಾಗಿದ್ದು ಹೃದಯದಿಂದ ಬರುವುದರಿಂದ ಕೇಳುವವರಿಗೆ ಬೇಸರವೆನಿಸುವುದಿಲ್ಲ. ನಾನಂತೂ ಕಿವಿ ನೆಟ್ಟಗೆ ಮಾಡಿಕೊಂಡು "ಆ ಮೇಲೆ? ಹೂಂ! ಮುಂದೇ ನಾಯಿತು?" ಎಂದು ಎಷ್ಟೋ ಹೊತ್ತು ಕುಳಿತುಬಿಡುತ್ತೇನೆ.

ಮೊನ್ನೆ ಸುಬ್ರಾಯನ ಷಷ್ಠಿಗೆ ನಮ್ಮ ತಾಯಿಯ ಮನೆಗೆ ಹೋಗಿದ್ದೆ ಮನೆಯಲ್ಲೇ ಷಷ್ಠೀ ಮಾಡಿದ್ದರಿಂದ ನಾವು ಯಾರೂ ಸುಬ್ರಹ್ಮಣ್ಯನ ರಥೋತ್ಸವಕ್ಕೆ ಹೋಗಲಿಲ್ಲ. ಅಜ್ಜಿ ಹೇಗಿದ್ದರೂ ಹೋಗಿರುತ್ತಾಳೆ. ಪ್ರಸಾದ ತಂದುಕೊಡುತ್ತಾಳೆ ಎಂದುಕೊಂಡೆ. ಆ ದಿನ ಎಂದಿಗಿಂತಲೂ ಮುಂಚಿತವಾಗಿಯೇ ಅಜ್ಜಿ ಬಂದಳು. "ಎಲ್ಲಜ್ಜೀ ಪ್ರಸಾದ? ಕೊಡುಮತ್ತೆ" ಎಂದೆ. "ಪ್ರಸಾದಕ್ಕೆ ದೇವಸ್ಥಾನಕ್ಕೆ ಯಾರು ಹೋಗಿದ್ರು ಮಗೂ!

ಇಲ್ಲವಲ್ಲಮ್ಮಾ" ಎಂದಳು. ನನಗೇಕೋ ಆಶ್ಚರ್ಯವಾಯಿತು. "ಎಲ್ಲಿ ಬೆಟ್ಟದ ತೇರು, ಎಲ್ಲಿ ಉತ್ಸವ, ಕಾವೇರಿ ಸ್ನಾನ ಎಂದು ಒಂದಕ್ಕೂ ಬಿಡದೆ ಹಾಜರಾಗ್ತಿದ್ದೆಯಲ್ಲಾ. ಇಷ್ಟು ಹತ್ತಿರದ ರಥೋತ್ಸವಕ್ಕೆ ಯಾಕೆ ಹೋಗಲಿಲ್ಲ? ನಿನಗೇನು ದುಡ್ಡಿಲ್ಲವೇ? ಕಾಸಿಲ್ಲವೇ? ಸ್ವಸ್ಥವಾಗಿದ್ದೀಯಷ್ಟೇ?" ಎಂದೆ. ನನ್ನ ಮಾತನ್ನು ಕೇಳಿ ಅವಳು ದೊಡ್ಡದಾಗಿ ನಿಟ್ಟುಸಿರಿಟ್ಟು "ಕಲ್ಲು ಗುಂಡಿನ ಹಾಗಿದ್ದೇನೆ. ನನಗೇನು! ಮುಖ್ಯ ಸುಬ್ರಮಣ್ಯ ನನ್ನನ್ನ ಗುಡೀಗೆ ಬರದ ಹಾಗೆ ಮಾಡಿಬಿಟ್ಟನಲ್ಲಮ್ಮಾ, ಇದ್ದ ಕಡೆಯೇ 'ಗೋವಿಂದ' ಅಂತೀನೆ. ಇಷ್ಟೇ ಅವನ ಚಿತ್ತ. ನಾನೇನ್ಮಾಡ್ಲೀ?" ಎಂದಳು.

"ಅದೇಕಜ್ಜೀ, ನಿನಗವನೇನ್ಮಾಡಿದಾ ಹೋಗದ ಹಾಗೆ?"

"ನನ್ನ ಪೂರ್ವ ಕರ್ಮಕ್ಕೆ ಅವನೇನ್ಮಾಡ್ತಾನೇ ಅನ್ನು. ಆದರೂ ನಾನು ಕಷ್ಟ ಸುಖವೆಲ್ಲಾ ಕಂಡದ್ದು ಅಲ್ಲೀ ಕಣಮ್ಮಾ! ಅದಕ್ಕೆ ನಾನು ನೆನಸಿಕೊಳ್ಳೊಲ್ಲಾ. ನಿಮ್ಮಗಳನ್ನೆಲ್ಲ ನೋಡಿ ಸಂತೋಷಪಟ್ಟುಕೊಂಡು ಕಾಲ ನೂಕಿಬಿಡ್ತೇನೆ.''

ಅಜ್ಜಿಯ ಮಾತುಗಳು ಸರಿಯಾಗಿ ಮನಸ್ಸಿಗೆ ಹಿಡಿಯಲಿಲ್ಲ. ಸ್ಪಷ್ಟವಾಗಿ ಕೇಳಿಬಿಡಬೇಕೆನ್ನಿಸಿತು. ಮತ್ತೊಮ್ಮೆ "ಬೇಡ ಅವಳ ಮನಸ್ಸಿಗೆ ನೋವಾಗಬಹುದು'' ಎನ್ನಿಸಿತು. ಕಡೆಗೆ ಕೇಳಿದರೂ, ಕೇಳದೇ ಇದ್ದರೂ ಈ ದಿನವೆಲ್ಲಾ ಅವಳು ತನ್ನ ಮುದ್ದುಮಗನನ್ನು ನೆನೆನೆನೆದು ಹೊಟ್ಟೆಯಲ್ಲೇ ವ್ಯಥೆಪಡುವುದು ಖಂಡಿತ. ಅದಕ್ಕೆ ಪ್ರತಿಯಾಗಿ ಇರುವ ದುಃಖವನ್ನೆಲ್ಲ ಬಾಯಾರ ಹೇಳಿಬಿಟ್ಟರೆ 'ನ ದುಃಖಂ ಪಂಚಭಿಶ್ಯತಿ' ಎನ್ನುವಂತೆ ಹೃದಯದ ಭಾರ ಕಡಿಮೆಯಾಗಬಹುದು. ಆದ್ದರಿಂದ ಕೇಳಿಬಿಡುವುದೇ ಒಳಿತೆಂದು ನಿರ್ಧರಿಸಿ, "ಅಜ್ಜೀ! ದೇವಸ್ಥಾನಕ್ಕೆ ಹೋಗುವುದು ನಿನ್ನ ಮನಸ್ಸಿಗೆ ಬೇಡ ಅನ್ನೋದು ಗೊತ್ತಾಯ್ತು. ಆದರೆ ಅದೇನೋ ಕದ್ದು ಪಡಕೊಂಡು ಬಂದೆ. ಕಳಿಸಿಬಿಟ್ಟೆ ಅಂದೆಯಲ್ಲಾ! ಅದೇನು ಸರಿಯಾಗಿ ಹೇಳತೀಯೇನಜ್ಜೀ ನನಗೆ?" ಎಂದೆ.

"ಅಯ್ಯೋ! ಹೇಳದೆ ಏನವ್ವ. ಎಂದೋ ನಡೆಯೋದು ನಡೆದು ಹೋಯಿತು. ಇವತ್ತು ಹೇಳಿದರೇನಾಗುತ್ತೆ? ಅದೇನಾಯ್ತು ಅಂತೀಯಾ? ನನ್ನ ಮದುವೆ ಆಗಿ ಎಂಟು ಹತ್ತು ವರುಷವಾದರೂ ಮಕ್ಕಳೇ ಆಗಿರ

ಲಿಲ್ಲ. ಐದು ಜನ ಸೊಸೆಯರ ಪೈಕಿ, ಮೊದಲನೇ ಇಬ್ಬರು ಓರಗಿತ್ತಿಯರಿಗೂ ಏಳೆಂಟು ಮಕ್ಕಳು, ಕೊನೆಯವರಿಬ್ಬರಿಗೂ ಒಂದೆರಡು ಮಕ್ಕಳು ಆಗಿದ್ದವು. ನಡುಕಲವಳಾದ ನನಗೇ ಮಕ್ಕಳಾಗಲಿಲ್ಲ. ನಮಗೆಲ್ಲಾ ದೊಡ್ಡ ಯೋಚನೆ ಹತ್ತಿಬಿಡ್ತು. ನಮಗೇ ಅಂದರೆ ಯಾರು ಯಾರಿಗೇ ಅಂತೀಯಾ? ನನಗೆ, ನಮ್ಮ ಯಜಮಾನರಿಗೆ, ಹೆಚ್ಚಾಗಿ ನಮ್ಮ ತಂದೆತಾಯಿಗಳಿಗೆ; ಯಾಕಂದರೆ ಅವರಿಗೆ ನಾನೊಬ್ಬಳೇ ಮಗಳು. ನನ್ನಿಂದ ದೌಹಿತ್ರ ಸಂತತಿ ಕಾಣಬೇಕೂಂತ ಬಾಯಿ ಬಿಟ್ಕೊಂಡಿರೋರು ಪಾಪ! ಆದರೆ ನೋಡೇ ಶಾರದೆ! ನಮ್ಮ ಅತ್ತೆ ಮನೆಯೋರು ಮಾತ್ರ "ಸದ್ಯ ಇವಳಿಗೆ ಮಕ್ಕಳು ಬೇಡ" ಅನ್ನೋರು.

"ಅದೇಕಜ್ಜೀ! ಅವರಿಗೇನು ಕಷ್ಟ ನಿನಗೆ ಮಕ್ಕಳಾದರೆ? ಮನೆ ತುಂಬಾ ಮಕ್ಕಳಿದ್ದರೇ ಚೆನ್ನಲ್ಲವೇ? ಇಷ್ಟಕ್ಕೂ ನಿನ್ನ ಗಂಡ ಕೈ ತುಂಬಾ ಸಂಪಾದಿಸುತ್ತಿರಲಿಲ್ಲವೇ? ಇದೀಗ ನ್ಯಾಯ!"

'ಅದೇ ಕಣಮ್ಮಾ ಬಂದಿದ್ದದ್ದು ಹೊಟ್ಟೆ ಉರಿ! ಸಂಪಾದನೆ ಎಲ್ಲಾ ಹೆಂಡ್ತಿ ಮಕ್ಕಳಿಗೆ ಕೊಡುತ್ತಾನೆ ಎಲ್ಲಾ ಅಂದುಬಿಟ್ಟು—ನಾವು ಮಕ್ಕಳನ್ನು ಕಂಡಾಯ್ತು ಮರಿ ಕಂಡಾಯ್ತು. ಸದ್ಯ ಅವಳಿಗೆ ಏನೂ ಬೇಡ ಇರೋರ ಮಕ್ಕಳನ್ನೇ ತನ್ನ ಮಕ್ಕಳೂ ಅಂದುಕೊಂಡು, ಮಾಡೋದನ್ನೆಲ್ಲಾ ಅವಕ್ಕೇ ಮಾಡಿದರೆ ಆಗೊಲ್ಲಾ ಅನ್ನುತ್ತೆವೆಯೋ? ಅನ್ನೋರು–ನಾನೇನು ಆ ಮಕ್ಕಳನ್ನು ಹಗೆ ಅಂತಿದ್ದೇನೇ? ಅವಕ್ಕೂ ಮಾಡ್ತಿದ್ದೆ. ಆದರೂ ಅವು ಹೊಟ್ಟೆ ಕರುಳು ಎನ್ನಿಸಿಕೊಳ್ಳುತ್ತವೆಯೋ? ನಾನು ತಾಯಿ ಆದ ಹಾಗೆ ಆಗುತ್ತೇಯೇ? ಮುಂದಾದರೂ ನಮ್ಮ ಮಕ್ಕಳು ಕಷ್ಟಕ್ಕೂ ಸುಖಕ್ಕೂ ಆಗೋ ಹಾಗೆ, ಅವರಿವರ ಮಕ್ಕಳು ಯಾಕಾಗ್ತಾರೆ? ಹೇಳು. ಇವೆಲ್ಲಾ ಯೋಚಿಸಿಕೊಂಡರೆ ಕಣ್ಮುಂದೆ ಕತ್ತಲೆ ಕವುಕೊಂಡ ಹಾಗೆ ಆಗೋದು. ಆದರೇನ್ಮಾಡೋ ಹಾಗಿದ್ದೆ? ಗಂಡಹೆಂಡರಿಬ್ಬರೂ ಮನಸ್ಸಿನಲ್ಲೇ ಕೊರಗೋವು. ಅವರಿಗೋ, ತಂದೆತಾಯಿ ಎದುರಿಗೆ ನಿಂತು "ಹೀಗಲ್ಲ ಹಾಗೆ" ಅನ್ನೋ ಧೈರ್ಯವೂ ಇರಲಿಲ್ಲ. ಆ ಕಾಲವೂ ಹಾಗೇ ಇತ್ತು ಅನ್ನು ಪಾಪ! 'ದೇವರು ಕಣ್ಬಿಟ್ಟು ನೋಡಿದರೇ ಆಗದೇ ಇರತ್ಯೇನೇ? ಆಗಿಯೋ ಆಗುತ್ತೆ. ಅವರನ್ನೋದನ್ನೆಲ್ಲ ಹಚ್ಚಿಕೊಂಡು ಕೊರಗಬೇಡ' ಅಂತಾ

ಸಮಾಧಾನ ಹೇಳೋರು ನಾನೂ ಮನೆಯೋರೆಲ್ಲಾ,ಏನಂದರೂ ಹೊಟ್ಟೇ ಲಿಟ್ಟ್ಕೊಂಡು ಆದಮಟ್ಟಿಗೂ ಅವರೆದುರಿಗೆ ನಗನಗತಾ ಇರೋವೆ. ನಮ್ಮವ್ವ ಒಂದು ಕಡೆ, ಅವರ ಮನೆಗೆ ಹೋದಾಗಲೆಲ್ಲಾ ಮಕ್ಕಳಾಗಲಿ ಎಂದು ಬಿಟ್ಟ್ವೆ ವ್ರತ ನೇಮ ಎಲ್ಲಾ ಮಾಡಿಸೋಳು. ನಾನೂ ಕಂಡುಕಂಡ ಕಲ್ಲು ದೇವರಿಗೆಲ್ಲಾ ಕೈ ಮುಗಿದೆ, ಹರಕೆ ಮಾಡಿಕೊಂಡೆ ಯಾವುದೂ ಫಲವಾಗಲಿಲ್ಲ. ಇದ್ದ ಆಸೆಯೂ ಹೋಗುತಾ ಬಂತು. ವ್ರತ, ನೇಮ, ಹರಕೆ ಎಲ್ಲಾ ಬಿಟ್ಟ್ಟು ನಿರಾಲೋಚನೆಯಾಗಿದ್ಬಿಟ್ಟಿದ್ದೆ. ಆಗ ಇದೇ ಸುಬ್ರಹ್ಮಣ್ಯನ ಜಾತ್ರೆ ಬಂತು ಯಾರೋ ಕಂಡು ಕೇಳಿದೋರು "ಗುಡೀಲೊಂದು ಒರಳು ಕಲ್ಲಿದೆ ಅದನ್ನು ಭಕ್ತಿಯಿಂದ ಮೂರು ಸಲ ತಿರಿವಿದರೆ ಮಕ್ಕಳಾಗುತ್ತೆ" ಅಂದ್ಬಿಟ್ಟರು ಆರುವ ದೀಪಕ್ಕೆ ಎಣ್ಣೆ ಬಿಟ್ಟ ಹಾಗೆ ನನ್ನಹಂಬಲು ತಿರುಗಿ ಸುರುವಾಯಿತು ಅದನ್ನೂ ಪರೀಕ್ಷೆಮಾಡಿ ನೋಡಿ ಬಿಡೋಣ ಎನಿಸಿತು. ಕರಕೊಂಡು ಹೋಗುವವರು ಯಾರು ? ಪೆಚ್ಚು ಮೋರೆ ಹಾಕಿಕೊಂಡು ಸುಮ್ಮನಾದೆ.

"ಮತ್ತೆ ಹೇಗೆ ಹೋದೆ?"

ಆ ಮೇಲೆ, ಹೀಗೇ ಯೋಚನೆಮಾಡಿ ಇವರ ಮುಂದೆ ಇದ್ದ ಸಂಗತಿ ಯನ್ನೆಲ್ಲಾ ಹೇಳಿಕೊಂಡೆ ನನ್ನಾಸೆ ನೋಡಿ ಎದೆ ಕರಗಿತೋ ಏನೋ, 'ನಾನು ಕರಕೊಂಡು ಹೋಗುತ್ತೇನೆ, ಸುಮ್ಮನಿರು. ದೇವರು ಮಾಡಿಸಿದ ಹಾಗೆ ಆಗಲಿ' ಅಂತಾ ಧೈರ್ಯ ಹೇಳಿದರು. ನನ್ನ ಪುಣ್ಯಕ್ಕೆ ಎಣೆಯಿಲ್ಲ ಎಂದುಕೊಂಡೆ

"ನಮ್ಮತ್ತೆಮಾವ ಗಾಡಿ ಕಟ್ಟಿಸಿಕೊಂಡು ರಥೋತ್ಸವಕ್ಕೆ ಹೊರಟು ಬಿಟ್ರು. ನನ್ನ ಮೂರು ಜನ ಓರಗಿತ್ತಿಯರೂ ತೌರೂರಿಗೆ ಹೋಗಿದ್ದರು. ಇನ್ನೊಬ್ಬಳನ್ನು, ಅವರ ಅಣ್ಣ ಬಂದು ತೇರಿಗೆ ಕರೆದುಕೊಂಡು ಹೋದ. ಇನ್ನು ಮನೆ ಕಾವಲಿಗೆ ನಾವು ತಾನೇ ಹೊಣೆ! ಸರಿ, ಅವರೆಲ್ಲಾ ಹೊರಟ ಸ್ವಲ್ಪ ಹೊತ್ತಿಗೆ, ಹಿತ್ಲ ಕಡೆಗೆ ಗಾಡಿ ಹತ್ತಿ, ಗೋಷಾದೋರ್ಹಾಗೆ ಒಂದು ಪರದೆ ಮಾಡಿಕೊಂಡು ಹೊರಟೇ ಬಿಟ್ವಿವು."

'ಏನಜ್ಜೀ! ಅಂಥಾ ಭಯ?'

'ಹಾಗಿತ್ತಮ್ಮ ಕಾಲ, ಹಾಗಿತ್ತು.! ದೇವಸ್ಥಾನದ ಹತ್ತಿರ ಇಳಿಯು

ವಾಗಂತೂ ಯಾರು ಕಂಡುಬಿಡುತ್ತಾರೆಯೋ? ಏನು ಹೇಳಿಬಿಡುತ್ತಾರೆಯೋ ಎಂದು ಎದೆ ಸುಮ್ಮನೆ ಹೊಡಕೋತಿರೋದು. ಸದ್ಯ ಯಾರೂ ಕಣ್ಣಿಗೆ ಬೀಳಲಿಲ್ಲ. ಮಹಾಮಂಗಳಾರತಿ ವೇಳೆಯಾದ್ದರಿಂದ ಎಲ್ಲರೂ ಗುಡಿಯ ಒಳಗೆ ಸೇರಿದ್ದರು. ನಾವೂ ಎಲ್ಲರ ಹಿಂಭಾಗದಲ್ಲಿ ನಿಂತು ಕಣ್ತುಂಬಾ ದೇವರ ದರ್ಶನ ಮಾಡಿದೆವು. ಇನ್ನೂ ನೋಡುತ್ತಿರೋಣ ಎನ್ನಿಸಿತು ಬಂದ ಕೆಲಸವೋ? ಜನರೆಲ್ಲಾ ಹೊರಗೆ ಹೊರಟಮೇಲೆ ಆಗುವವಮಾತೇ? ಮಂಗಳಾರತಿ ಆಗುವುದಕ್ಕೂ ಸಹ ಕಾಯಲಿಲ್ಲ. ಹೊರಗೆ ಬಂದುಬಿಟ್ಟೆವು. ಒಳ ಪ್ರಾಕಾರದಲ್ಲಿದ್ದ ಒರಳಿನ ಬಳಿ ಹೋಗಿ ಅಲ್ಲಿದ್ದ ಹುಂಡಿಗೆ ಒಂದು ರೂಪಾಯಿ ಹಾಕಿಬಿಟ್ಟೆ. ಸುತ್ತಮುತ್ತಲು ಒಂದು ಸಲ ನೋಡಿ, ಮನಸ್ಸಿನಲ್ಲಿ ದೇವರಿಗೆ ಹರಕೆ ಮಾಡಿಕೊಂಡು, ಅಲ್ಲಿದ್ದ ತಿರುವ ಗುಂಡನ್ನು ಮೂರಾವರ್ತಿ ತಿರುವಿಬಿಟ್ಟು, ಸರಕ್ಕನೆ ಈಚೆ ಬಂದುಬಿಟ್ಟೆ. ಆ ಹೊತ್ತಿಗೆ ಸರಿಯಾಗಿ ಮಂಗಳಾರತಿಯಾಗಿ ಗಂಟೆ ಬಾರಿಸಿತು. ಶುಭಸೂಚನೆಯೇ ಆಯಿತು. ಸ್ವಾಮಿಯ ಮನಸ್ಸಿಗೆ ನಮ್ಮ ವಿಷಯ ಬಂದಿತೋ ಏನೋ ಎಂದುಕೊಂಡು, ಬಂದಿದ್ದ ಗಾಡಿಯಲ್ಲಿ ಹಿಂತಿರುಗಿ ಬಂದು, ಕಳ್ಳರ ಹಾಗೆ ಮನೆ ಸೇರಿಬಿಟ್ಟೆವು. ಮನೆಯವರೆಲ್ಲಾ ಸಂಜೆ ಹೊತ್ತಿಗೆ ಮನೆಗೆ ಬಂದರು. ನಾವುಮಾತ್ರ ಏನೂ ಅರಿಯದವರ ಹಾಗೆ ಇದ್ದು ಬಿಟ್ಟೆವು ಅವರೆ, ನಮ್ಮಿಬ್ಬರ ಮನಸ್ಸಿಗೂ ಹೇಳೋಕೆ ಬರದಂಥಾ ಹಿಗ್ಗು. ಒಬ್ಬರಿಗೊಬ್ಬರು ನೋಡೋದು, ಒಳಗೊಳಗೆ ನಗೋದು, ಇದೇ ಕೆಲಸವಾಗಿ ಹೋಯಿತು.”

‘ ಪರವಾಯಿಲ್ಲಜ್ಜೀ ! ಮನೆಯವರೆಲ್ಲಾ ಒಂದಾದರೂ, ಮಾಡಿಕೊಂಡ ಗಂಡನಾದರೂ ನಿನ್ನ ಕಡೆಗಿದ್ದನಲ್ಲಾ ! ನಿನಗೇನು ಕೊರತೆ ಆಗಿದ್ದದ್ದು ? ’

‘ ಅವರೆ? ? ಹಸುಮಗೂನಂಥೋರು ಕಣೆ ಶಾರದೇ ! ನನ್ನನ್ನು ಅವರ ಜೀವಕ್ಕಿಂತ ಹೆಚ್ಚು ಅಂದುಕೊಂಡಿದ್ದರು. ಹಾಗಿರೋ ಹೊತ್ತಿಗೇ, ನಾನೂ ಆ ಮನೆಯಲ್ಲಿ, ಅಲ್ಪಸ್ವಲ್ಪವಾದರೂ ಸುಖ ಸಂತೋಷ ಅನ್ನೋದನ್ನ ಕಂಡೆ. ಇಲ್ಲದಿದ್ದರೆ ಕನಸಿನಲ್ಲೂ ಕಾಣ್ತಿರಲಿಲ್ಲ ನೋಡು ! ’

‘ ಅದಿರಲಿ, ಆಮೇಲೆಷ್ಟು ದಿವಸಕ್ಕೆ ನಿನ್ನ ಮಗ ಹುಟ್ಟಿದ್ದು ಅಜ್ಜೀ ಳು ಮಂಚಿ. ’

‘ ಎಷ್ಟು ದಿವಸಕ್ಕೇನು ? ಅದೇ ವರ್ಷವೇ ಹುಟ್ಟಿದ ಮಗೂ ಅಂದರೆ, ಇನ್ನು ಹೇಗಿರೋದೋ ಶಾರದೇ ! ಕಡೆದ ಬುಗರಿ ಹಾಗಿರೋದು! ಆ ಬಣ್ಣ! ಆ ಮೈ ಕಟ್ಟು !! ಆ ಕಣ್ಣು !!! ಮನೆ ಮಕ್ಕಳೆಲ್ಲಾ ಯಾಕವನ ಮುಂದೆ? ಹಾಗಿರುವ ನಮ್ಮ ಸುಬ್ಬು ! ಆ ದೇವರ ಪ್ರಸಾದ ಅಂದುಬಿಟ್ಟು, ಅದೇ ಹೆಸರೇ ಇಟ್ಟೆ ಆ ದೇವರಲ್ಲಿ ಇನ್ನೇನು ಸತ್ಯವೋ ನೋಡು, ಹರಸಿಕೊಂಡೇಟಿಗೆ ಫಲಪ್ರಾಪ್ತಿ ಆಯಿತು!’

“ ದೇವರ ಸತ್ಯಕ್ಕಿಂತ ನಿನ್ನ ದೃಢವಾದ ಭಕ್ತಿ ನಂಬಿಕೆ ಹೆಚ್ಚಿನದೂ ಅಂತೇನೆ ಅಜ್ಜೀ ಅದರಿಂದಲೇ ನಿನಗೆ ಒಳ್ಳೆಯ ಫಲ ದೊರಕಿತು. ನಿನ್ನ ಮಗೂನ ಗಂಡು ನಿಮ್ಮತ್ತೆ ಮಾವ ಹೇಗಿದ್ದರು ?”

“ ಅತ್ತೆಮ್ಮನೋರು ಬಿಡು, ಎಂದಿಗೂ ಒಂದೇ. ಮಾವನೋರು ಮಾತ್ರ ಮಗುವಿನ ಆಟಪಾಟ ನೋಡುತ್ತಾ ನಮ್ಮ ಸುಬ್ಬು ಸಮಾನ ಮಕ್ಕಳುಂಟೇ ? ಅನ್ನೋರು.”

“ ನೀವು ಮಾಡಿದ ಕೆಲಸ ಪತ್ತೆ ಇಲ್ಲದಿದ್ದರೂ ನಿಮ್ಮತ್ತೆ ಹಾಗಾಡ್ತಿದ್ದರೂ ಅಂದರೆ ಇನ್ನು ಗೊತ್ತಾಗಿ ಬಿಟ್ಟಿದ್ದರೆ ?”

‘‘ ಗೊತ್ತಾಗದೆ ಏನು ಶಾರದೇ ! ಎಷ್ಟು ದಿವಸ ತಾನೇ ಗುಟ್ಟು ಮುಚ್ಚಿಡೋಕಾದೀತು ? ಮಗುವಿಗೆ ವರ್ಷ ತುಂಬುತ್ತಲೇ, ಪಾದಕ್ಕೆ ಕರೆದುಕೊಂಡು ಬಂದು ಸೇವೆ ಮಾಡಿಸ್ತೇನೆ ಅಂತಾ ಹರಕೆ ಮಾಡಿಕೊಂಡು ಬಂದಿದ್ದೆನಲ್ಲಾ! ಹರಕೆ ತೀರಿಸದಿದ್ದರೆ ಸ್ವಾಮಿ ಸುಮ್ಮನೆ ಬಿಡ್ತಾನೆಯೇ ? ಮನೆಯೋರಿಗೆ ತಿಳಿಸದೆ ಹರಕೆ ಒಪ್ಪಿಸೋ ಬಗೆಯಾದರೂ ಹೇಗೆ ? ಹೇಳಲೇಬೇಕಾಯಿತು. ಬಾಯಿಗೆ ಬಂದ ಹಾಗೆ ಬೈಸಿಕೊಂಡದ್ದೂ ಆಯಿತು. ಆ ಮೇಲೆ ಎಲ್ಲಾ ಮರೆತೂ ಹೋಯಿತು ಅನ್ನು. ಈ ಕಾಲಕ್ಕೆ ಅವನೇ ಪುಣ್ಯವಂತ. ಅಮಲ್ದಾರೀ ಕೆಲಸ ಮಾಡಿದ. ಜನಗಳಿಗೆ ತನ್ನ ಕೈಲಾದ ಸಹಾಯಾನೂ ಮಾಡಿದ. ಮಕ್ಕಳು ಮೊಮ್ಮಕ್ಕಳನ್ನ ಕಂಡ. ಒಬ್ಬರ ಕೈಕೆಳಗೆ ಬೀಳದೆ ಹಾಗೆ ತನ್ನ ಕೈಕಾಲು ಗಟ್ಟಿ ಇರುವಾಗಲೇ ಸ್ವಾಮಿ ಪಾದ ಸೇರಿಬಿಟ್ಟ. ಮುಖ್ಯ ನನಗೆ ಬಂತು ಸಂಕಟ. ನನ್ನನ್ನು ಪರದೇಸಿ ಮಾಡಿ ಹೊರಟು ಹೋದ.’

‘‘ ಅವನ ಕೈಲೇನಿತ್ತಜ್ಜೀ ? ಅವನ ಮನಸ್ಸಿನಲ್ಲೇನಾದರೂ ನಿನಗೆ

ಮಾಡಬಾರದೂ ಎಂದಿತ್ತೇ? ಎಲ್ಲಾ ಅದೃಷ್ಟ ತಾನೇ ?''

''ಅಷ್ಟಲ್ಲದೇ ಏನು ಮಗೂ! ನನ್ನ ಋಣಾನುಬಂಧ ಎಲ್ಲಿಯವರೆವಿಗಿತ್ತೋ ಅಲ್ಲಿಗೇ ಆಗಿಹೋಯಿತು ಆಮೇಲೆ ಒಂದು ಕ್ಷಣ ಬೇಕು ಎಂದರೂ ಇಲ್ಲ. ನಾವೂ ಶಾಶ್ವತವಾಗಿ ಇರೋರಲ್ಲಾ. ದಿನಗಳು ಹತ್ತಿರವಾಗ್ತಿವೆ ಅದಕ್ಕಲ್ಲ, ಯಾರ ಮುಂಗಡವಾಗಿ ಯಾರು ಹೋಗಬೇಕೋ ಅವರು ಹೋದರೆ ?'' — ಅಷ್ಟೇ.''

''ಎಲ್ಲಾ ನಮ್ಮ ಗುಣಾಕಾರಕ್ಕೆ ಸರಿಯಾಗಿ ನಡೆಯುತ್ತೇನಜ್ಜೀ! ಹಾಗೆ ನಡೆಯೋದಾದರೆ ನಮ್ಮನ್ನು ಹಿಡಿಯೋರ್‍ಯಾರು? 'ನಾವೊಂದು ನೆನಸಿದರೆ ದೇವರೊಂದು ನೆನೆಸುತ್ತಿರುತ್ತಾನೆ' ಅಂತಾ ನೀನೇ ಹೇಳ್ತಿರತ್ತೀಯಲ್ಲವೇ? ಹೋಗಲಿ ಬಿಡು. ಆಗಲೇ 'ದೇವರ ನಾಮ ಹೇಳು ಕೇಳಬೇಕು' ಅಂದೆಯಲ್ಲಾ. ಬಾ ಹೇಳ್ತೇನೆ.''

'' ಹೇಳು ಮಗೂ! ಆ ಭಗವಂತನ ಸ್ಮರಣೆಯಾದರೂ ಕೇಳಿದರೆ ಮುಂದೆ ಗತಿಯಾದರೂ ಸಿಕ್ಕುತ್ತೆ.''

ಅಜ್ಜಿ ಹೊರಟುಹೋದ ಮೇಲೆ ಅವಳ ಕರುಣ ಕಥೆಯನ್ನೆಲ್ಲಾ ನೆನೆದು ದುಃಖವಾಯಿತು. ಇದು ವರೆಗೂ ನಾನು ಅವಳನ್ನು ಅತಿಯಾಗಿ ಹೊಂದಿಕೊಂಡಿದ್ದರೂ ಸಹ, ಅವಳ ವಿಚಾರವೇ ನನಗೆ ಗೊತ್ತಿರಲಿಲ್ಲ. ಇನ್ನೂ ಹುಡುಗಿಯಾಗಿದ್ದ ನನಗೆ ಅದನ್ನೆಲ್ಲಾ ಕೇಳುವ ಅವಶ್ಯಕತೆಯಾದರೂ ಏನಿತ್ತು? ಮೇಲಾಗಿ, ಅವಳೂ ಸಹ ಕಾಗೆ ಗುಬ್ಬಿ ಕಥೆಯಲ್ಲದೆ ಬೇರೆ ಯಾವುದನ್ನೂ ಹೇಳುತ್ತಿರಲಿಲ್ಲ.

ಈ ಕಥೆಯು ಅವಳ ಜೀವನದ ಒಂದೇ ಒಂದು ಅನುಭವ ಮಾತ್ರವಾಗಿರುವಾಗ, ಎಷ್ಟೋ ಹಳ್ಳ ತಿಟ್ಟುಗಳನ್ನು ಹಾದು ಹಣ್ಣಾಗುತ್ತಿರುವ ಅವಳ ಒಂದೊಂದು ಸುಖದುಃಖದ ಅನುಭವವೂ ಒಂದೊಂದು ಕಥೆಯಲ್ಲದೆ ಮತ್ತೇನು?

